# ಇಸ್ಲಾಮೀ ಆಂದೋಲನ
# ಮತ್ತು
# ದೇಶಬಾಂಧವರು

ಲೇಖಕರು

ಮೌ| ಸೈಯದ್ ಹಾಮಿದ್ ಅಲೀ

ಅನುವಾದಕರು

ತುಫೈಲ್ ಮುಹಮ್ಮದ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಮುನ್ನುಡಿ

ಇಸ್ಲಾಮ್ ಅಲ್ಲಾಹನ ಧರ್ಮವಾಗಿದೆ. ಅದೊಂದು ಸಂಪೂರ್ಣ ಜೀವನ ವ್ಯವಸ್ಥೆಯಾಗಿದೆ. ಅದನ್ನು ಅನುಸರಿಸಿ ಜೀವಿಸಿದ ಮಾನವನಿಗೆ ಈ ಲೋಕದಲ್ಲಿ ಶಾಂತಿ, ನೆಮ್ಮದಿ ಮತ್ತು ಸುಭಿಕ್ಷೆಯ ಬದುಕು ಪ್ರಾಪ್ತವಾಗುವುದು ಮತ್ತು ಪರಲೋಕದಲ್ಲಿ ಸ್ವರ್ಗದ ರೂಪದಲ್ಲಿ ಶಾಶ್ವತ ಸುಖ ಸೌಭಾಗ್ಯಗಳೂ ಲಭಿಸುವುದು. ಈ ಜೀವನ ಪದ್ಧತಿಯನ್ನು ನಿರಾಕರಿಸಿ ಅಥವಾ ಧಿಕ್ಕರಿಸಿ ಬದುಕುವವರು ಇಹಲೋಕದಲ್ಲೂ ದೇವ ಯಾತನೆಗೆ ಗುರಿಯಾಗುವರು ಮತ್ತು ಪರಲೋಕದ ಶಾಶ್ವತ ಜೀವನವಂತೂ ಅವರ ಪಾಲಿಗೆ ಅತ್ಯಂತ ಯಾತನಾಮಯವಾಗಿರುವುದು. ಭಾರತದಲ್ಲಿ ಇಸ್ಲಾಮ್ ಧರ್ಮದ ಅನುಯಾಯಿಗಳು 'ಮುಸ್ಲಿಮ'ರೆಂಬ ಹೆಸರಿನಿಂದ ಕರೆಯಲ್ಪಡುತ್ತಾರೆ. ಅವರ ನಡೆ-ನುಡಿ, ಜೀವನ ವಿಧಾನವು ದುರ್ದೈವವಶಾತ್ ಇಸ್ಲಾಮನ್ನು ಪ್ರತಿಬಿಂಬಿಸುವುದಿಲ್ಲವೆಂಬುದೇ ವಾಸ್ತವ. ಅವರು ಪರಂಪರಾಗತ ಮುಸ್ಲಿಮರಾಗಿರುವುದೇ ಇದಕ್ಕೆ ಕಾರಣ. ಮುಸ್ಲಿಮರು ನಿಜವಾಗಿ ಅಲ್ಲಾಹನ ಗ್ರಂಥದ (ಕುರ್‌ಆನ್) ಆದೇಶಗಳನ್ನೂ ಪ್ರವಾದಿಚರ್ಯೆಯನ್ನೂ ಅನುಸರಿಸಿ ಜೀವಿಸುವ ಮೂಲಕ ದೇಶಬಾಂಧವರಿಗೆ ಮಾದರಿಯಾಗಬೇಕಾದವರು. ತನ್ಮೂಲಕ ದೇಶಬಾಂಧವರ ಮೇಲೆ ಸತ್ಯದ ಸಾಕ್ಷ್ಯವಹಿಸಬೇಕಾದವರು. ಎಲ್ಲಕ್ಕಿಂತಲೂ ಮಿಗಿಲಾಗಿ ದೇಶಬಾಂಧವರಿಗೆ ಇಸ್ಲಾಮಿನ ಉದಾತ್ತ ಜೀವನ ಪದ್ಧತಿಯನ್ನು ಪರಿಚಯಿಸುವ ಗುರುತರವಾದ ಹೊಣೆಗಾರಿಕೆ ಅವರ ಮೇಲಿದೆ. ಮುಸ್ಲಿಮರು ಇಸ್ಲಾಮಿನ ನೈಜ ವಾಹಕರಾಗಿದ್ದುಕೊಂಡು ಇಸ್ಲಾಮಿನ ಪರಿಚಯವನ್ನು ದೇಶಬಾಂಧವರ ಮುಂದಿಡುವಂತೆ ಈ ದೇಶದ ಅತಿದೊಡ್ಡ ಇಸ್ಲಾಮಿ ಆಂದೋಲನವಾಗಿರುವ ಜಮಾಅತೆ ಇಸ್ಲಾಮಿ ಹಿಂದ್ ಪ್ರೇರೇಪಿಸುತ್ತದೆ. ಈ ನಿಟ್ಟಿನಲ್ಲಿ ಬರಬಹುದಾದ ಅಡೆ-ತಡೆ, ಸಮಸ್ಯೆ ಇತ್ಯಾದಿಗಳ ಬಗ್ಗೆ ಕೂಲಂಕಷ ಸಮೀಕ್ಷೆ ನಡೆಸಿ ಸೂಕ್ತ ಪರಿಹಾರ ಸೂಚಿಸಿದ್ದಾರೆ. ಮರ್‌ಹೂಮ್ ಮೌ| ಸೈಯದ್ ಹಾಮಿದ್ ಅಲೀ ಅವರು 1981ರಲ್ಲಿ ಹೈದರಾಬಾದ್‌ನಲ್ಲಿ ಜರಗಿದ ಆರನೇ ಅಖಿಲ ಭಾರತ ಸಮ್ಮೇಳನದಲ್ಲಿ ಅವರು ಮಾಡಿದ ಭಾಷಣದ ಕನ್ನಡ ಅನುವಾದವೇ ಈ ಕೃತಿ. ದೇಶಬಾಂಧವರಲ್ಲಿ ಸಂದೇಶ ಪ್ರಚಾರ ಮಾಡುವ ಇಸ್ಲಾಮಿ ಕಾರ್ಯಕರ್ತರಿಗೆ ಇದೊಂದು ಕೈಪಿಡಿಯಾಗಿದೆ.

- ಪ್ರಕಾಶಕರು

# ಅನುಕ್ರಮಣಿಕೆ


- ಧರ್ಮಾಹ್ವಾನ. ........ 08
- ಸತ್ಯದ ಸಾಕ್ಷ್ಯ. ........ 09
- ಧರ್ಮ ಸಂಸ್ಥಾಪನೆ. ........ 13
- ಇಸ್ಲಾಮೀ ಆಂದೋಲನ ವಿಶ್ವಮಾನವ ಆಂದೋಲನವಾಗಿದೆ. ........ 14
- ಇಸ್ಲಾಮೀ ಆಂದೋಲನದ ಹಿತಾಸಕ್ತಿ. ........ 16
- ಸಾಮುದಾಯಿಕ ಸಮಸ್ಯೆಗಳು. ........ 17
- ರಾಷ್ಟ್ರೀಯ ಸಮಸ್ಯೆಗಳು. ........ 18
- ಸಂದೇಶ ಪ್ರಚಾರ ನಿಷ್ಪ್ರಯೋಜಕ. ........ 21
- ಸಂದೇಶ ಪ್ರಚಾರ ನಿಷ್ಪ್ರಯೋಜಕವಲ್ಲ. ........ 23
- ಇಂದಿನ ಭಾರತ ಭಿನ್ನವಾಗಿದೆ. ........ 26
- ಪ್ರತಿಭೆ ಇಲ್ಲದಿರುವುದು. ........ 28
- ಸೂಕ್ತ ಸಾಹಿತ್ಯದ ಕೊರತೆ. ........ 31
- ಭಾಷೆಯ ಅಪರಿಚಿತತೆ. ........ 34
- ನವ ಮುಸ್ಲಿಮರ ಸಮಸ್ಯೆಗಳು. ........ 35
  - ವಿವಾಹ ಸಮಸ್ಯೆ. ........ 35
  - ಶಿಕ್ಷಣ ಮತ್ತು ತರಬೇತಿಯ ಸಮಸ್ಯೆ. ........ 39
  - ಸಾಮಾಜಿಕ ಸಮಸ್ಯೆ. ........ 41
  - ವಂಚನೆ ಮತ್ತು ಚಾರಿತ್ರ್ಯ ಹೀನತೆ. ........ 41
- ಕಾರ್ಯ ವಿಧಾನ. ........ 45
  1. ಹಕ್ಕುಗಳ ಪೂರ್ತೀಕರಣ. ........ 46
  2. ಸಹಕಾರ ಮತ್ತು ಸಹಭಾಗಿತ್ವ. ........ 47
  3. ಮನುಷ್ಯನನ್ನು ಅಭ್ಯಸಿಸುವುದು. ........ 48
  4. ಸಂಭಾಷಣೆ. ........ 48
  5. ಪುಸ್ತಕಗಳ ಅಧ್ಯಯನ. ........ 48


~ ~ ~

ಇಸ್ಲಾಮ್ ಏಕೈಕ ಸತ್ಯಧರ್ಮವಾಗಿದೆ. ಅದನ್ನು ಬಿಟ್ಟು ಬೇರಾವುದೇ ಧರ್ಮ ಅಲ್ಲಾಹನ ಬಳಿ ಸ್ವೀಕಾರಾರ್ಹವಲ್ಲ. ಇತರ ಯಾವ ಧರ್ಮದಿಂದಲೂ ಪರಲೋಕ ವಿಜಯವನ್ನು ಗಳಿಸವುದು ಸಾಧ್ಯವಿಲ್ಲ. ಪವಿತ್ರ ಕುರ್‌ಆನ್ ಬಹಳ ಸ್ಪಷ್ಟ ಮಾತುಗಳಲ್ಲಿ ಹೀಗೆ ಹೇಳುತ್ತದೆ.: "ಯಾರಾದರೂ ಈ ವಿಧೇಯತೆಯ (ಇಸ್ಲಾಮ್) ಹೊರತು ಯಾವುದೇ ಇತರ ಪದ್ಧತಿಯನ್ನು ಸ್ವೀಕರಿಸಲಿಚ್ಛಿಸಿದರೆ, ಅವನ ಆ ಪದ್ಧತಿಯನ್ನು ಎಷ್ಟು ಮಾತ್ರಕ್ಕೂ ಮಾನ್ಯ ಮಾಡಲಾಗದು ಮತ್ತು ಪರಲೋಕದಲ್ಲಿ ಅವನು ವಿಫಲನೂ ಹತಾಶನೂ ಆಗಿ ತೀರುವನು". (3:85)

ಇಸ್ಲಾಮ್ ಎಲ್ಲ ಪ್ರವಾದಿಗಳ ಧರ್ಮವಾಗಿದ್ದರೂ ಪ್ರವಾದಿ ಮುಹಮ್ಮದ್(ಸ)ಮತ್ತು ಕುರ್‌ಆನ್‌ನ ಮುಖಾಂತರ ಮಾನವಕುಲಕ್ಕೆ ದೊರೆತ ಆವೃತ್ತಿಯೇ ಅದರ ಸುರಕ್ಷಿತ, ಸಮಗ್ರ, ಅಧಿಕೃತ ಹಾಗೂ ಅಂತಿಮ ಆವೃತ್ತಿಯಾಗಿದೆ.: "ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮ್ಮ ಮೇಲೆ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿಮ್ಮ ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ."ಗತಪ್ರವಾದಿಗಳ ಅನುಯಾಯಿಗಳೂ ಅರ್ಥಾತ್ ಗ್ರಂಥದವರು ಸೇರಿದಂತೆ ಸಕಲ ಮಾನವರಿಗೆ ಮೋಕ್ಷ ಮತ್ತು ಪರಲೋಕದ ಶಾಶ್ವತ ಯಶಸ್ಸಿಗೆ ಈಗ ಉಳಿದಿರುವ ಏಕೈಕ ಮಾರ್ಗವೆಂದರೆ ಪ್ರವಾದಿ ಮುಹಮ್ಮದ್(ಸ) ಅವರು ತಂದ ಸತ್ಯಧರ್ಮ 'ಇಸ್ಲಾಮ್'ಅನ್ನು ಅಂಗೀಕರಿಸಿ ಅದನ್ನು ಅನುಸರಿಸುವುದಾಗಿದೆ.:"ಅಲ್ಲಾಹನ ಬಳಿ ಧರ್ಮವು ಇಸ್ಲಾಮ್ ಮಾತ್ರ. ಗ್ರಂಥ ಕೊಡಲ್ಪಟ್ಟವರು ಈ ಧರ್ಮದಿಂದ ಸರಿದು ವಿವಿಧ ಸಂಪ್ರದಾಯಗಳನ್ನು ಕೈಗೊಂಡರು. ಅವರು ಜ್ಞಾನ ಬಂದ ನಂತರ ಒಬ್ಬರು ಇನ್ನೊಬ್ಬರ ಮೇಲೆ ಅತಿರೇಕವೆಸಗ ಬಯಸಿದರೆಂದಲ್ಲದೆ ಹೀಗೆ ಮಾಡಲು ಬೇರಾವ ಕಾರಣವೂ ಇರಲಿಲ್ಲ ಮತ್ತು ಅಲ್ಲಾಹನ ಆದೇಶಗಳ ಅನುಸರಣೆಯನ್ನು ನಿರಾಕರಿಸುವವರ ವಿಚಾರಣೆ ಮಾಡುವುದರಲ್ಲಿ ಅಲ್ಲಾಹ್ ಅತಿ ಶೀಘ್ರನು. ಇನ್ನು ಓ ಪ್ರವಾದಿಯವರೇ, ಅವರು ನಿಮ್ಮೊಂದಿಗೆ ಜಗಳಾಡಿದರೆ ಅವರೊಡನೆ -'ನಾನು ಮತ್ತು ನನ್ನ ಅನುಯಾಯಿಗಳಂತು ಅಲ್ಲಾಹನಿಗೆ ಶರಣಾಗತರಾಗಿದ್ದೇವೆ' ಎಂದು ಹೇಳಿರಿ, ಗ್ರಂಥದವರೊಡನೆಯೂ ಗ್ರಂಥದವರಲ್ಲದವರೊಡನೆಯೂ 'ನೀವೂ ಆತನ ಅನುಸರಣೆಯನ್ನು ಸ್ವೀಕರಿಸಿದಿರಾ?'ಎಂದು ಕೇಳಿರಿ. ಸ್ವೀಕರಿಸಿದರೆ, ಅವರು ಸನ್ಮಾರ್ಗ ಪಡೆದರು ಮತ್ತು ಉಪೇಕ್ಷಿಸಿದರೆ, ನಿಮ್ಮ ಮೇಲಂತೂ ಸಂದೇಶವನ್ನು ಮುಟ್ಟಿಸುವ ಹೊಣೆ ಮಾತ್ರವಿತ್ತು. ಮುಂದೆ ಅಲ್ಲಾಹ್ ತನ್ನ ದಾಸರೊಂದಿಗೆ ಸ್ವತಃ ವ್ಯವಹರಿಸುವವನಿದ್ದಾನೆ." (ಆಲಿ ಇಮ್‌ರಾನ್: 19-20)

ಪವಿತ್ರ ಕುರ್‌ಆನ್ ಆರಂಭದಲ್ಲೇ ಈ ವಿಷಯವನ್ನು ಸ್ಪಷ್ಟವಾಗಿ ಸಾರಿದೆ. ಹಿಂದಿನ ಪ್ರವಾದಿಗಳು ಮತ್ತು ಗ್ರಂಥಗಳ ಜೊತೆಗೆ ಅಂತಿಮ ಪ್ರವಾದಿ ಮುಹಮ್ಮದ್(ಸ) ಹಾಗೂ ಅಂತಿಮ ಗ್ರಂಥ ಪವಿತ್ರ ಕುರ್‌ಆನ್‌ನ ಮೇಲೆ ವಿಶ್ವಾಸ ವಿರಿಸಿದವರು ಹಾಗೂ ಆ ವಿಶ್ವಾಸದ ಪ್ರಕಾರ ಜೀವನ ನಡೆಸಿದವರು ಮಾತ್ರ ಸನ್ಮಾರ್ಗ ಮತ್ತು ವಿಜಯಕ್ಕೆ ಪಾತ್ರರಾಗುವರೆಂದು ಅದರಲ್ಲಿ ತಿಳಿಸಲಾಗಿದೆ:

"ಅಲಿಫ್ ಲಾಮ್ ಮೀಮ್. ಇದು (ದೈವಿಕ) ಗ್ರಂಥ; ಸಂದೇಹಾತೀತವಿದು. ಮುತ್ತಕೀಗಳಿಗೆ (ಭಯ ಭಕ್ತಿಯುಳ್ಳವರು) ಇದು ಮಾರ್ಗದರ್ಶಿ. ಪರೋಕ್ಷದ ಮೇಲೆ ವಿಶ್ವಾಸವಿರಿಸುವವರಿಗೆ, ನಮಾಝನ್ನು ಸಂಸ್ಥಾಪಿಸುವವರಿಗೆ, ನಾವು ನೀಡಿರುವ ಸಂಪತ್‌ಸೌಕರ್ಯಗಳಿಂದ ವ್ಯಯಿಸುವವರಿಗೆ, ನಿಮಗೆ ಅವತೀರ್ಣಗೊಳಿಸಿದ ಗ್ರಂಥದ (ಅರ್ಥಾತ್ ಕುರ್‌ಆನ್) ಮತ್ತು ನಿಮಗಿಂತ ಮೊದಲು ಅವತೀರ್ಣಗೊಳಿಸಿದ್ದ ಎಲ್ಲ ಗ್ರಂಥಗಳ ಮೇಲೆ ವಿಶ್ವಾಸವಿಡುವವರಿಗೆ ಮತ್ತು ಆಖಿರತ್‌ನ (ಪರಲೋಕದ) ಮೇಲೆ ದೃಢವಿಶ್ವಾಸವಿಡುವವರಿಗೆ (ಇದು ಮಾರ್ಗದರ್ಶಿ). ಅಂತಹವರು ತಮ್ಮ ಪ್ರಭುವಿನ ಸನ್ಮಾರ್ಗದಲ್ಲಿದ್ದಾರೆ ಮತ್ತು ಅವರೇ ಯಶಸ್ವಿಯಾಗುವವರು." (ಅಲ್ ಬಕರಃ- 1ರಿಂದ 5)

ಪ್ರವಾದಿ ಮುಹಮ್ಮದ್(ಸ) ಅವರು ಯಾವುದೇ ನಿರ್ದಿಷ್ಟ ರಾಷ್ಟ್ರ, ಸಮಾಜ ಅಥವಾ ಕಾಲಕ್ಕಾಗಿ ನಿಯೋಗಿಸಲ್ಪಟ್ಟ ಸಂದೇಶವಾಹಕರಲ್ಲ. ಅವರು ಎಲ್ಲ ಮಾನವರಿಗಾಗಿ ಕಳುಹಿಸಲ್ಪಟ್ಟ ಪ್ರವಾದಿಯಾಗಿದ್ದಾರೆ.: "ಪೈಗಂಬರರೇ, ನಾವು ನಿಮ್ಮನ್ನು ಸಕಲ ಲೋಕದವರಿಗೆ ಅನುಗ್ರಹವಾಗಿ ಮಾಡಿ ಕಳುಹಿಸಿರುತ್ತೇವೆ." (ಕುರ್‌ಆನ್, 21: 107) ಪ್ರವಾದಿ ಮುಹಮ್ಮದ್(ಸ) ಅವರು ದೇವನ ಅಂತಿಮ ಸಂದೇಶವಾಹಕರಾಗಿರುವುದರಿಂದ ಪ್ರಳಯಕಾಲದ ವರೆಗಿನ ಎಲ್ಲ ಮಾನವರಿಗೂ ಅವರು ದೇವ ಪ್ರವಾದಿಯಾಗಿದ್ದಾರೆ.:"(ಜನರೇ) ಮುಹಮ್ಮದ್(ಸ) ನಿಮ್ಮ ಪುರುಷರ ಪೈಕಿ ಯಾರದೇ ತಂದೆಯಲ್ಲ. ವಾಸ್ತವದಲ್ಲಿ ಅವರು ಅಲ್ಲಾಹನ ಸಂದೇಶವಾಹಕರು ಮತ್ತು ಪ್ರವಾದಿಗಳಲ್ಲಿ ಕೊನೆಯವರಾಗಿರುತ್ತಾರೆ." (ಕುರ್‌ಆನ್, 33:40)

ಪ್ರವಾದಿವರ್ಯರು(ಸ) ತಂದಂತಹ ಇಸ್ಲಾಮ್ ಧರ್ಮ ಸಕಲ ಮಾನವರ ಪರಲೋಕ ಮೋಕ್ಷ ಮತ್ತು ಶಾಶ್ವತ ವಿಜಯದ ಮಾರ್ಗ ಮಾತ್ರವಾಗಿರಲಿಲ್ಲ. ಮಾನವರ ಲೌಕಿಕ ವಿಜಯ ಮತ್ತು ಔನ್ನತ್ಯವೂ ಅದರಲ್ಲೇ ಅಡಕವಾಗಿದೆ. : "ನೀವು ಧೈರ್ಯಗುಂದ ಬೇಡಿರಿ, ವ್ಯಥೆಪಡಲೂ ಬೇಡಿರಿ, ನೀವು ವಿಶ್ವಾಸಿಗಳಾಗಿದ್ದರೆ ನೀವೇ ವಿಜಯಿಗಳಾಗುವಿರಿ." (ಪವಿತ್ರ ಕುರ್‌ಆನ್-3:139) ಸೂರಃ ಯೂನುಸ್‌ನಲ್ಲಿ ಈ ವಾಸ್ತವಿಕತೆಯನ್ನೇ ಇನ್ನಷ್ಟು ಸ್ಪಷ್ಟೀಕರಣಗಳೊಂದಿಗೆ ಹೀಗೆ ವಿವರಿಸಲಾಗಿದೆ.: "ಕೇಳಿರಿ, ನಿಶ್ಚಯವಾಗಿಯೂ ಅಲ್ಲಾಹನ ಮಿತ್ರರಾಗಿರುವವರಿಗೆ, ಯಾವತ್ತು ಭಯ ಮತ್ತು ವ್ಯಥೆಯ ಸಂಭವವೇ ಇಲ್ಲ. ಅವರು ಸತ್ಯವಿಶ್ವಾಸವಿರಿಸಿಕೊಂಡವರು ಮತ್ತು ತಕ್ವಾದ (ಧರ್ಮನಿಷ್ಠೆ) ನಿಲುಮೆಯನ್ನಿರಿಸಿಕೊಂಡವರು. ಇಹ, ಪರ ಜೀವನಗಳೆರಡರಲ್ಲೂ ಅವರಿಗೆ ಭಾರೀ ಶುಭವಾರ್ತೆಯಿದೆ. ಅಲ್ಲಾಹನ ವಚನಗಳು ಬದಲಾಗುವಂತಿಲ್ಲ. ಇದೇ ಅತಿ ಹಿರಿದಾದ ಯಶಸ್ಸು. (ಕುರ್‌ಆನ್, 10:62 ರಿಂದ 64)

ಕುರ್‌ಆನ್‌ನ ಈ ಸ್ಪಷ್ಟ ಬೋಧನೆಗಳನ್ನು ನಾವು ನಂಬುತ್ತೇವೆ. ಈ ನಂಬಿಕೆ ಮತ್ತು ವಿಶ್ವಾಸದ ಸಹಜ ಬೇಡಿಕೆಯೆಂಬ ನೆಲೆಯಲ್ಲಿ ನಾವು ಈ ಧರ್ಮದ ಕಡೆಗೆ ಹೆಚ್ಚು ಹೆಚ್ಚು ಜನರನ್ನು ಆಹ್ವಾನಿಸ...ವ ಅಗತ್ಯವಿದೆ ಮತ್ತು ಅವರಿಗೆ ಸತ್ಯಧರ್ಮವನ್ನು ತೋರಿಸಿಕೊಡಲು ನಮ್ಮ ಗರಿಷ್ಠ ಸಾಮರ್ಥ್ಯವನ್ನು ಬಳಸಬೇಕಾಗಿದೆ. ಮನುಷ್ಯ ಯಾವ ಮಾರ್ಗವನ್ನು ತಾನು

ಸತ್ಯವೆಂದು ಭಾವಿಸುತ್ತಾನೋ ಅದರಲ್ಲಿ ಒಬ್ಬಂಟಿಯಾಗಿ ನಡೆಯಲು ಇಷ್ಟಪಡುವುದಿಲ್ಲ. ಇತರ ಮಾನವರನ್ನೂ ಆ ಮಾರ್ಗಕ್ಕೆ ಕರೆಯುವಂತೆ ಆತನ ವಿಶ್ವಾಸ ಮತ್ತು ನಂಬಿಕೆಯು ಆತನನ್ನು ಬಲವಂತ ಪಡಿಸುತ್ತದೆ. ಅದರಲ್ಲೂ ಆತನ ಅಭಿಸಂಬೋಧಿತರು ಸ್ವಂತ ಕುಟುಂಬ, ಮೊಹಲ್ಲಾ, ಬಡಾವಣೆ ಮತ್ತು ರಾಷ್ಟ್ರದ ಜನರೆಂದಾದಲ್ಲಿ, ಆತನ ಬಳಿಯಿರುವ ಸಂದೇಶ ಸಾಮಾನ್ಯ ಸಂದೇಶವಾಗಿರದೆ ಅದನ್ನು ಸ್ವೀಕರಿಸುವವರಿಗೆ ಇಹ, ಪರಲೋಕಗಳಲ್ಲಿ ಯಶಸ್ಸನ್ನೂ ಅದನ್ನು ತಿರಸ್ಕರಿಸುವವರಿಗೆ ಇಹ, ಪರಲೋಕಗಳ ನಷ್ಟವನ್ನೂ ತಂದೊಡ್ಡುತ್ತದೆಂದಾದರೆ ಪಥಭ್ರಷ್ಟ ಮನುಷ್ಯರನ್ನು ಅಜ್ಞಾನ ಮತ್ತು ನಿಂದ್ಯತೆಯಿಂದ ರಕ್ಷಿಸಿ ಲೌಕಿಕ ಯಶಸ್ಸು ಹಾಗೂ ಪಾರತ್ರಿಕ ವಿಜಯದ ಮಾರ್ಗಕ್ಕೆ ಕರೆತರುವುದಕ್ಕಿಂತ ದೊಡ್ಡದಾದ ಮಾನವ ಸೇವೆ ಬೇರಾವುದಾದರೂ ಇರಲು ಸಾಧ್ಯವೇ? ಅಸಂಖ್ಯ ಜನರ ಇಹ ಮತ್ತು ಪರಲೋಕ ಜೀವನ ನಾಶವಾಗುತ್ತಿರುವುದನ್ನು ನೋಡಿಯೂ ಅವರನ್ನು ರಕ್ಷಿಸಲು ನಾವು ಸಕ್ರಿಯರಾಗುವುದಿಲ್ಲವೆಂದಾದರೆ ಮಾನವೀಯತೆಯ ಮೇಲೆ ಅದಕ್ಕಿಂತ ಮಿಗಿಲಾದ ಅನ್ಯಾಯವನ್ನು ಕಲ್ಪಿಸಲು ಸಾಧ್ಯವೇ?ನಮ್ಮ ಬಡಾವಣೆಗೆ ಬಿದ್ದ ಬೆಂಕಿಯನ್ನು ನಂದಿಸಲು ಮತ್ತು ಜನರನ್ನು ಅದರಿಂದ ರಕ್ಷಿಸಲು ನಾವು ಪರಿಣಾಮ ಲೆಕ್ಕಿಸದೆ ಮುನ್ನುಗ್ಗುತ್ತೇವೆ ಮತ್ತು ಸಾಧ್ಯವಿರುವುದನ್ನೆಲ್ಲಾ ಮಾಡುತ್ತೇವೆ. ಹಾಗಿರುವಾಗ ಮಾನವಕೋಟಿಯ ಒಂದು ದೊಡ್ಡ ಗುಂಪು ನರಕದ ಭಯಾನಕ ಅಗ್ನಿಯ ಕಡೆಗೆ ಧಾವಿಸುತ್ತಿರುವುದನ್ನು ನೋಡಿಯೂ ಆ ಬಗ್ಗೆ ಕಳವಳ ಪಡದಿರಬೇಕಾದರೆ ನಮಗೆ ಆಗಿರುವುದಾದರೂ ಏನು? ಇಸ್ಲಾಮ್ ಸತ್ಯಧರ್ಮವಾಗಿರುವ ಬಗ್ಗೆ ನಮಗೆ ದೃಢವಿಶ್ವಾಸ ಇಲ್ಲವಾಯಿತೇ? ಸತ್ಯನಿಷೇಧ ಮತ್ತು ಬಹುದೇವಾರಾಧನೆಯ ಪ್ರತಿಫಲ ಪರಲೋಕದ ಯಾತನಾಮಯ ಮತ್ತು ಭೀಕರ ಅಗ್ನಿಯಾಗಿದೆಯೆಂಬ ನಂಬಿಕೆ ದುರ್ಬಲವಾಯಿತೇ?ಸ್ವರ್ಗದ ಶಾಶ್ವತ ಹಾಗೂ ಕೊನೆಯಿಲ್ಲದ ಅನುಗ್ರಹಗಳ ಕಲ್ಪನೆ, ನರಕದ ಶಾಶ್ವತ ಮತ್ತು ಭಯಾನಕ ಶಿಕ್ಷೆಯ ಪ್ರಜ್ಞೆ ನಮಗೆ ಇಲ್ಲವಾಯಿತೇ? ನಮ್ಮ ಹೃದಯ ಮಾನವಕುಲದ ಕಷ್ಟಗಳಿಗೆ ಕಲ್ಲಾಗಿ ಬಿಟ್ಟಿತೇ? ದೇವನ ಅಸಂಖ್ಯ ದಾಸರು ತಮ್ಮ ಇಹಲೋಕವನ್ನು ನಾಶಪಡಿಸುತ್ತಿರುವಾಗಲೂ ಪರಲೋಕದ ಜ್ವಾಲಾಗ್ನಿಯ ಕಡೆಗೆ ಧಾವಿಸುತ್ತಿರುವಾಗಲೂ ನಮ್ಮಲ್ಲಿ ಕಿಂಚಿತ್ ಕಳವಳ ಕೂಡಾ ಮೂಡುತ್ತಿಲ್ಲವಲ್ಲಾ. ನಮ್ಮ ನಿದ್ರೆಗೆ ಕಿಂಚಿತ್ ಭಂಗವೂ ಉಂಟಾಗುತ್ತಿಲ್ಲವಲ್ಲ. ದೇವನ ದಾಸರನ್ನು ಆ ಭಯಾನಕ ಶಿಕ್ಷೆಯಿಂದ ರಕ್ಷಿಸಲು ನಾವು ಯಾಕೆ ಮುಂದಾಗುತ್ತಿಲ್ಲ?ನಮ್ಮ ಈ ಗಂಭೀರ ಅಸಡ್ಡೆಗೆ ಏನಾದರೂ ಕಾರಣವಿರಬೇಕು ತಾನೆ? ಯಾಕೆ ಹೀಗಾಗುತ್ತಿದೆಯೆಂದು ನಾವು ನಮ್ಮ ಹೃದಯವನ್ನೊಮ್ಮೆ ಮುಟ್ಟಿ ನೋಡುವ. ನಮ್ಮ ನಿಷ್ಕ್ರಿಯತೆ ಮತ್ತು ಸೋಮಾರಿತನವೇ ಇದಕ್ಕೆ ಕಾರಣವೇ? ಅಥವಾ ಅದರ ಬೇರುಗಳು ನಮ್ಮ ವಿಶ್ವಾಸದವರೆಗೂ ತಲಪಿ ನಾವು ದುರ್ಬಲ ವಿಶ್ವಾಸದ ಅಪಾಯಕಾರಿ ರೋಗಕ್ಕೆ ಬಲಿಯಾಗಿ ಬಿಟ್ಟಿದ್ದೇವೆಯೇ? (ಶಾಂತಂ ಪಾಪಂ)

## ಧರ್ಮಾಹ್ವಾನ

ದೇವನ ದಾಸರಿಗೆ ಸಾಧ್ಯವಿರುವಷ್ಟು ಮಟ್ಟಿಗೆ ಸತ್ಯಧರ್ಮದ ಆಹ್ವಾನವನ್ನು ನೀಡುವುದು ಖಂಡಿತವಾಗಿಯೂ ನಮ್ಮ ಧಾರ್ಮಿಕ ಪ್ರಜ್ಞೆ ಹಾಗೂ ಸತ್ಯವಿಶ್ವಾಸಿ ಸ್ವಭಾವದ ಅನಿವಾರ್ಯ ಬೇಡಿಕೆಯಾಗಿದೆ. ಆದರೆ ನಮ್ಮ ದೌರ್ಬಲ್ಯಗಳನ್ನು ನಮಗಿಂತಲೂ ಚೆನ್ನಾಗಿ ಬಲ್ಲ ಅಲ್ಲಾಹನು ಈ ವಿಷಯವನ್ನು ನಮ್ಮ ಧರ್ಮಪ್ರಜ್ಞೆ ಮತ್ತು ವಿಶ್ವಾಸಕ್ಕೆ ಬಿಟ್ಟು ಬಿಟ್ಟಿಲ್ಲ. ಅತ್ಯಂತ ಸ್ಪಷ್ಟ ಮಾತುಗಳಲ್ಲಿ ಜನರನ್ನು ಸತ್ಯಧರ್ಮದ ಕಡೆಗೆ ಕರೆಯುವಂತೆ ನಮಗೆ ಆದೇಶ ನೀಡಲಾಗಿದೆ. ಮಾತ್ರವಲ್ಲ ಯಾವ ರೀತಿ ಜನರನ್ನು ಕರೆಯಬೇಕು ಎಂಬುದನ್ನೂ ವಿವರಿಸಲಾಗಿದೆ.: " ಓ ಪೈಗಂಬರರೇ, ಯುಕ್ತಿ ಹಾಗೂ ಸದುಪದೇಶದ ಮೂಲಕ ನಿಮ್ಮ ಪ್ರಭುವಿನ ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ ಮತ್ತು ಜನರೊಂದಿಗೆ ಅತ್ಯುತ್ತಮ ರೀತಿಯಿಂದ ವಾದಿಸಿರಿ." (16: 125) ಆಲಿ ಇಮ್‌ರಾನ್ ಅಧ್ಯಾಯದಲ್ಲಿ ಸತ್ಯವಿಶ್ವಾಸಿಗಳಿಗೆ ದೇವಭಯ, ಅಲ್ಲಾಹನ ಪಾಶವನ್ನು ಬಿಗಿಯಾಗಿ ಹಿಡಿಯುವುದು ಮತ್ತು ಇಸ್ಲಾಮಿೂ ಐಕ್ಯವನ್ನು ನೆನಪು ಮಾಡಿ ಕೊಟ್ಟ ಬಳಿಕ ಅಲ್ಲಾಹನು ಹೀಗೆ ಹೇಳುತ್ತಾನೆ.:"ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ. ಈ ಕಾರ್ಯವೆಸಗುವವರೇ ನಿಶ್ಚಯವಾಗಿಯೂ ಕೃತಾರ್ಥರಾಗುವರು."

(3-104)

ಕೆಲವು ಸೂಕ್ತಗಳ ನಂತರ ಮುಸ್ಲಿಮ್ ಸಮುದಾಯವನ್ನು 'ಉತ್ತಮ ಸಮುದಾಯ'ಎಂದು ಘೋಷಿಸುತ್ತಾ ಅಲ್ಲಾಹನು ಹೀಗೆಂದಿದ್ದಾನೆ.: "ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಗಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ, ಪಾಪ ಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ." (ಆಲಿ ಇಮ್‌ರಾನ್-110)

ಧರ್ಮಾಹ್ವಾನ, ಒಳಿತಿನ ಸಂಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನದ ಹೊರತು ಮೋಕ್ಷ ಮತ್ತು ವಿಜಯ ಗಳಿಸುವುದು ಸಾಧ್ಯವಿಲ್ಲ ಎಂಬುದು ಮೇಲಿನ ಸೂಕ್ತಗಳಿಂದ ಸ್ಪಷ್ಟ ವಾಗುತ್ತದೆ. ಇವು ಸತ್ಯವಿಶ್ವಾಸಿಗಳ ಕರ್ತವ್ಯ ಮಾತ್ರವಲ್ಲ, ಪ್ರತಿಯೊಬ್ಬ ಮುಸ್ಲಿಮನ ಹಾಗೂ ಮುಸ್ಲಿಮ್ ಸಮುದಾಯದ ಮೂಲಭೂತ ಗುಣ ವೈಶಿಷ್ಟ್ಯ ಮತ್ತು ಜೀವನೋದ್ದೇಶವೆಂಬುದು ಕೂಡಾ ಪ್ರಸ್ತುತ ಸೂಕ್ತದಿಂದ ವ್ಯಕ್ತವಾಗುತ್ತದೆ. ಮುಸ್ಲಿಮ್ ಸಮುದಾಯ 'ಉತ್ತಮ ಸಮುದಾಯ' ಎಂಬ ವೈಶಿಷ್ಟ್ಯಕ್ಕೆ ಪಾತ್ರವಾಗಬೇಕಾದರೆ ಜನರನ್ನು ಸನ್ಮಾರ್ಗ ಮತ್ತು ಸುಧಾರಣೆಯ ಕಡೆಗೆ ಕರೆಯಬೇಕು ಹಾಗೂ ಒಳಿತಿನ ಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನದ ಕರ್ತವ್ಯವನ್ನು ಈಡೇರಿಸಬೇಕು ಎಂಬುದು ಕೂಡಾ ಇದರಿಂದ ಸ್ಪಷ್ಟವಾಗುತ್ತದೆ.

ಧರ್ಮವನ್ನು ಪಾಲಿಸದ ಮುಸ್ಲಿಮರ ಸುಧಾರಣೆ ಪವಿತ್ರ ಕುರ್‌ಆನ್‌ನ ಪ್ರಸ್ತುತ ಸೂಕ್ತಗಳಲ್ಲಿ ಉಲ್ಲೇಖಿಸಲಾಗಿರುವ 'ಧರ್ಮಾಹ್ವಾನ'ದ ವ್ಯಾಪ್ತಿಯಲ್ಲಿ ಬರುವುದಿಲ್ಲ ಎಂಬುದನ್ನು

ಇಲ್ಲಿ ಸ್ಪಷ್ಟಪಡಿಸಬೇಕಾದ ಅಗತ್ಯವಿಲ್ಲ. ಯಾಕೆಂದರೆ ಮುಸ್ಲಿಮರು ಆಹ್ವಾನ ಸ್ವೀಕರಿಸಬೇಕಾದ (ಮದ್‌ಊ) ವರಲ್ಲ. ಅವರು ಆಹ್ವಾನ ನೀಡಬೇಕಾದ (ದಾಈ) ಜನರಾಗಿದ್ದಾರೆ.'ದಅ್‌ವತ್'ನ ನೈಜ ಅಭಿಸಂಬೋಧಿತರು ಮುಸ್ಲಿಮೇತರರಾಗಿದ್ದಾರೆ. ಮುಸ್ಲಿಮ್ ಸಮುದಾಯದ ವ್ಯಾಪ್ತಿಯಿಂದ ಹೊರಗಿರುವ ಮತ್ತು ಇಸ್ಲಾಮಿನಿಂದ ಅಶ್ರದ್ಧರಾದ ಜನರನ್ನು ಅಲ್ಲಾಹನ ಧರ್ಮದೆಡೆಗೆ ಕರೆಯುವುದು, ಶಿರ್ಕನ್ನು ಖಂಡಿಸಿ ಏಕದೇವಾರಾಧನೆಯ ಸನ್ಮಾರ್ಗದೆಡೆಗೆ ಅವರನ್ನು ಒಯ್ಯುವುದು, ಸ್ವರ್ಗದ ಶಾಶ್ವತ ಸುಖ ಮತ್ತು ನರಕದ ಶಾಶ್ವತ ಶಿಕ್ಷೆಯ ಬಗ್ಗೆ ಅವರನ್ನು ಜಾಗೃತಗೊಳಿಸುವುದು'ದಅ್‌ವತ್'ನ ನೈಜ ಕಾರ್ಯವಾಗಿದೆ. ಸಂದೇಶ ಪ್ರಚಾರದ ಈ ಕೆಲಸ ಮಾನವ ಹಿತಾಕಾಂಕ್ಷೆಯ ಪರಮೋನ್ನತ ನಿದರ್ಶನವಾಗಿರುವಂತೆಯೇ ಸಂದೇಶ ಪ್ರಚಾರಕನ (ದಾಈ) ಮಟ್ಟಿಗೆ ಅಸಾಮಾನ್ಯ ಪ್ರತಿಫಲವನ್ನು ಒದಗಿಸಬಲ್ಲ ಉಪಾಧಿಯಾಗಿದೆ. ಪ್ರವಾದಿವರ್ಯರು(ಸ) ಹೀಗೆಂದಿದ್ದಾರೆ:

"ಯಾರು (ಜನರನ್ನು) ಸನ್ಮಾರ್ಗದ ಕಡೆಗೆ ಆಹ್ವಾನಿಸುತ್ತಾನೋ ಆತನಿಗೆ ಆ ಸಂದೇಶವನ್ನು ಅಂಗೀಕರಿಸಿ ನಡೆಯುವ ಎಲ್ಲ ವ್ಯಕ್ತಿಗಳಿಗೆ ಸಿಗುವ ಪ್ರತಿಫಲದಷ್ಟು ಪುಣ್ಯ ಸಿಗಲಿದೆ. ಅದೇ ವೇಳೆ ಆ ವ್ಯಕ್ತಿಗಳ ಪ್ರತಿಫಲದಲ್ಲಿ ಯಾವುದೇ ಕೊರತೆ ಆಗಲಿಕ್ಕಿಲ್ಲ. ಯಾರು (ಜನರನ್ನು) ಪಥಭ್ರಷ್ಟತೆಯೆಡೆಗೆ ಕರೆಯುತ್ತಾನೋ ಆತನಿಗೆ ಆ ಸಂದೇಶವನ್ನು ಅಂಗೀಕರಿಸಿ ಆ ಪ್ರಕಾರ ನಡೆಯುವ ಎಲ್ಲ ವ್ಯಕ್ತಿಗಳಿಗೆ ಸಿಗುವಷ್ಟು ಶಿಕ್ಷೆ ಸಿಗುವುದು. ಅದೇವೇಳೆ ಆ ವ್ಯಕ್ತಿಗಳ ಶಿಕ್ಷೆಯಲ್ಲಿ ಯಾವ ಕಡಿತವೂ ಆಗಲಾರದು." (ಬುಖಾರಿ, ಮುಸ್ಲಿಮ್)

## ಸತ್ಯದ ಸಾಕ್ಷ್ಯ

ಮುಸ್ಲಿಮ್ ಸಮುದಾಯದ ನೈಜ ನೆಲೆ ಜನರ ಮೇಲೆ ಅಲ್ಲಾಹನ ಸಾಕ್ಷಿಗಳಾಗುವುದಾಗಿದೆ ಮತ್ತು ಸಮುದಾಯದ ಜೀವನೋದ್ದೇಶ ಸತ್ಯದ ಸಾಕ್ಷ್ಯವಹಿಸುವುದಾಗಿದೆ ಎಂದು ಪವಿತ್ರ ಕುರ್‌ಆನ್‌ನಿಂದ ನಮಗೆ ಸ್ಪಷ್ಟವಾಗುತ್ತದೆ. ಈ ಹಿಂದೆ ಸತ್ಯಸಾಕ್ಷ್ಯದ ಕೆಲಸಕ್ಕಾಗಿ ನಿಯೋಗಿಸಲ್ಪಟ್ಟಿದ್ದ ಇಸ್ರಾಈಲ್ ಜನಾಂಗದ ಬಗ್ಗೆ ವಿಸ್ತಾರವಾದ ವಿಮರ್ಶೆಯ ನಂತರ ಸೂರಃ ಅಲ್ ಬಕರಃದಲ್ಲಿ ಹೀಗೆ ಘೋಷಿಸಲಾಗಿದೆ: "ಇದೇ ರೀತಿ ನೀವು ಜಗತ್ತಿನ ಮಾನವರ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಯಾಗಲಿಕ್ಕೂ ನಾವು ನಿಮ್ಮನ್ನು ಒಂದು ಸುಮಧ್ಯ ಸಮುದಾಯವಾಗಿ ಮಾಡಿದ್ದೇವೆ." (ಕುರ್‌ಆನ್:2-143)

ಸೂರಃ ಹಜ್ಜ್‌ನ ಕೊನೆಯಲ್ಲಿ ಆ ಅಧ್ಯಾಯದ ಪಾಠಗಳನ್ನು ಸಂಕ್ಷೇಪಿಸುತ್ತಾ, ಮಾತ್ರವಲ್ಲ ಧರ್ಮದ ಸಾರಾಂಶವನ್ನು ವಿವರಿಸುತ್ತಾ ಅಲ್ಲಾಹನು ಹೀಗೆ ಹೇಳುತ್ತಾನೆ: "ಸತ್ಯವಿಶ್ವಾಸಿಗಳೇ 'ರುಕೂಅ್' ಮಾಡಿರಿ (ಬಾಗಿರಿ )ಮತ್ತು 'ಸಜ್ದಃ' ಮಾಡಿರಿ (ಸಾಷ್ಟಾಂಗವೆರಗಿರಿ) ಮತ್ತು ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ. ಸತ್ಕರ್ಮಗಳನ್ನೆಸಗಿರಿ. ಇದರಿಂದಲೇ ನಿಮಗೆ ಯಶಸ್ಸು ಸಿಗುವುದೆಂದು ನಿರೀಕ್ಷಿಸಬಹುದು. ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕಾದ

ರೀತಿಯಲ್ಲಿ ಹೋರಾಡಿರಿ. ಅವನು ತನ್ನ ಕಾರ್ಯಕ್ಕಾಗಿ ನಿಮ್ಮನ್ನು ಆರಿಸಿಕೊಂಡಿರುತ್ತಾನೆ ಮತ್ತು ಧರ್ಮದಲ್ಲಿ ನಿಮಗೇನೂ ಸಂಕೀರ್ಣತೆಯನ್ನಿರಿಸಿಲ್ಲ. ನಿಮ್ಮ ಪಿತಾಮಹರಾದ ಇಬ್ರಾಹೀಮರ ಸಮುದಾಯದಲ್ಲಿ ಸ್ಥಿರವಾಗಿರಿ. ಅಲ್ಲಾಹನು ಮೊದಲೂ ನಿಮ್ಮ ಹೆಸರನ್ನು 'ಮುಸ್ಲಿಮ್' ಎಂದಿಟ್ಟಿದ್ದನು ಮತ್ತು ಇದರಲ್ಲೂ (ಕುರ್‌ಆನ್‌ನಲ್ಲೂ ನಿಮಗೆ ಇದೇ ಹೆಸರಿದೆ.). ಇದು ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ (ಆಗಿರುತ್ತದೆ.) ಆದುದರಿಂದ ನಮಾಝನ್ನು ಸಂಸ್ಥಾಪಿಸಿರಿ, ಝಕಾತ್ ಕೊಡಿರಿ ಮತ್ತು ಅಲ್ಲಾಹನೊಂದಿಗೆ ಸಂಬಂಧ ಸ್ಥಾಪಿಸಿಕೊಂಡಿರಿ. ಅವನೇ ನಿಮ್ಮ ರಕ್ಷಕ ಮಿತ್ರ. ಅತ್ಯಂತ ಶ್ರೇಷ್ಠ ರಕ್ಷಕ ಮಿತ್ರನವನು ಮತ್ತು ಅತ್ಯುತ್ತಮ ಸಹಾಯಕನವನು." (22: 77, 78)

ಮುಸ್ಲಿಮ್ ಸಮುದಾಯದ ಮುಂದೆ ಸತ್ಯದ ಸಾಕ್ಷ್ಯವನ್ನು ಮಾತು-ಕೃತಿಗಳ ಮೂಲಕ ವಹಿಸುವುದು ಪ್ರವಾದಿ ಮುಹಮ್ಮದ್‌ರ(ಸ) ಕರ್ತವ್ಯ ವಾಗಿತ್ತೆಂಬುದು ಈ ಸೂಕ್ತಗಳಿಂದ ವ್ಯಕ್ತವಾಗುತ್ತದೆ. ಪ್ರವಾದಿ ಮುಹಮ್ಮದ್‌ರು(ಸ) ನಮ್ಮ ಮೇಲೆ ಸಾಕ್ಷಿಗಳಾದಂತೆಯೇ ಮಾನವಕುಲದ ಎದುರು ಈ ಸಾಕ್ಷ್ಯದ ಹೊಣೆ ನಿಭಾಯಿಸುವುದು ಮುಸ್ಲಿಮ್ ಸಮುದಾಯದ ಕರ್ತವ್ಯವಾಗಿದೆ. ಈ ಸಾಕ್ಷ್ಯವನ್ನು ನಿರ್ವಹಿಸಿದ ಬಳಿಕವೇ ಮುಸ್ಲಿಮ್ ಸಮುದಾಯ ಪಾರತ್ರಿಕ ಮೋಕ್ಷ ಹೊಂದಲು ಮತ್ತು ದೇವನೊಂದಿಗಿನ ಹಾಗೂ ಮನುಷ್ಯನೊಂದಿಗಿನ ತಮ್ಮ ಬಾಧ್ಯತೆಯಿಂದ ಮುಕ್ತಿ ಹೊಂದಲು ಸಾಧ್ಯ.

ಸತ್ಯದ ಸಾಕ್ಷ್ಯವಹಿಸುವುದು ಪ್ರವಾದಿಗಳ ಮೂಲಭೂತ ಕರ್ತವ್ಯವಾಗಿದೆ. ಅದರ ಮಹತ್ವವನ್ನು ಇದರಿಂದ ಅರ್ಥಮಾಡಬಹುದಾಗಿದೆ. ಮನುಷ್ಯನ ಲೌಕಿಕ ಮತ್ತು ಪಾರತ್ರಿಕ ವಿಜಯಕ್ಕೆ ಕಾರಣವಾಗುವ ಸತ್ಯ ಧರ್ಮವು ಅಲ್ಲಾಹನ ವತಿಯಿಂದ ಪ್ರವಾದಿಗಳ ಮೇಲೆಯೇ ಅವತೀರ್ಣಗೊಳ್ಳುತ್ತದೆ. ಈ ಧರ್ಮವನ್ನು ಯಾವುದೇ ಚ್ಯುತಿಯಿಲ್ಲದೆ ದೇವನ ದಾಸರಿಗೆ ತಲಪಿಸುವುದು ಪ್ರವಾದಿಗಳ ಕರ್ತವ್ಯವಾಗಿದೆ. ಮಾತ್ರವಲ್ಲ ಜೀವನ ಪರ್ಯಂತ ಮಾತು, ಕೃತಿಗಳ ಮೂಲಕ ಈ ಧರ್ಮದ ವ್ಯಾವಹಾರಿಕ ಸಾಕ್ಷ್ಯವಹಿಸಬೇಕಾದ ಹೊಣೆಯೂ ಅವರ ಮೇಲಿದೆ. ಪ್ರವಾದಿಗಳು ಈ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸಿದರೆ ಅಲ್ಲಾಹನ ಬಳಿ ಸಂಪೂರ್ಣ ಹೊಣೆಮುಕ್ತರಾಗುತ್ತಾರೆ ಮತ್ತು ಅತ್ಯುತ್ಕೃಷ್ಟ ಪ್ರತಿಫಲಕ್ಕೆ ಅರ್ಹರಾಗುತ್ತಾರೆ. ಯಾರು ಈ ಸತ್ಯಸಾಕ್ಷ್ಯದ ಹೊರತಾಗಿಯೂ ಸತ್ಯವನ್ನು ಸ್ವೀಕರಿಸುವುದಿಲ್ಲವೋ ಅವರು ಇಹಲೋಕದಲ್ಲೂ ಪರಲೋಕದಲ್ಲೂ ಅಲ್ಲಾಹನ ಉಗ್ರ ಶಿಕ್ಷೆಗೆ ಪಾತ್ರರಾಗುತ್ತಾರೆ. ಒಂದು ವೇಳೆ ಪ್ರವಾದಿಗಳು ಈ ಕರ್ತವ್ಯ ನಿರ್ವಹಣೆಯಲ್ಲಿ ಲೋಪ ಮಾಡಿದರೆ ಸತ್ಯನಿಷೇಧಿಗಳಿಗಿಂತ ಮೊದಲು ಅವರು ಅಲ್ಲಾಹನ ಬಳಿ ವಿಚಾರಣಾರ್ಹರಾಗುತ್ತಾರೆ. (ಶಾಂತಂ ಪಾಪಂ) ಉತ್ತರದಾಯಿತ್ವದ ಈ ಶ್ರೇಷ್ಠ ಪ್ರಜ್ಞೆಯಿಂದಾಗಿ ಸಂದೇಶವಾಹಕರು ನೆಮ್ಮದಿಯಿಂದ ಕುಳಿತುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅವರು ತಮ್ಮ ಪೂರ್ಣ ಸಾಮರ್ಥ್ಯ, ಪ್ರತಿಯೊಂದು ಮಾತು, ಕೃತಿಯನ್ನು ಸತ್ಯಸಾಕ್ಷ್ಯದ ನಿರ್ವಹಣೆಗಾಗಿ ಮುಡಿಪಾಗಿಟ್ಟಿದ್ದರು. ಮಾತ್ರವಲ್ಲ ಈ

ಕರ್ತವ್ಯವನ್ನು ನಿರ್ವಹಿಸುತ್ತಲೇ ಅವರು ಇಹಲೋಕ ಯಾತ್ರೆಗೆ ವಿದಾಯ ಹೇಳುತ್ತಿದ್ದರು.

ಆದರೆ ಪ್ರವಾದಿಗಳು ಸತ್ಯಸಾಕ್ಷ್ಯದ ಈ ಜವಾಬ್ದಾರಿಯನ್ನು ಏಕಾಂಗಿಯಾಗಿ ನಿರ್ವಹಿಸುತ್ತಿದ್ದುದಲ್ಲ. ಅವರು ಅದಕ್ಕಾಗಿ 'ಮುಸ್ಲಿಮ್ ಸಮುದಾಯ'ವನ್ನು ರೂಪಿಸುತ್ತಿದ್ದರು. ತಮ್ಮ ಮಾತು-ಕೃತಿಗಳ ಮುಖಾಂತರ ಸತ್ಯದ ಸಾಕ್ಷ್ಯವಹಿಸಿ ಸಮುದಾಯವನ್ನು ಆ ಸತ್ಯದ ವಿಶ್ವಸ್ಥರನ್ನಾಗಿ ಮಾಡುತ್ತಿದ್ದರು. ಈ ಸಮುದಾಯವು ಪ್ರವಾದಿಯ ಕರ್ತವ್ಯ ನಿರ್ವಹಣೆಯಲ್ಲಿ ತನು ಮನ ಧನದ ಸಹಕಾರವನ್ನು ಕೊಟ್ಟು 'ಅನ್ಸಾರುಲ್ಲಾಹ್'ಅರ್ಥಾತ್ 'ದೇವಸಹಾಯಕರು'ಎನಿಸಿಕೊಳ್ಳುತ್ತಿದ್ದರು. ಸೂರಃ ಸಫ್ಫ್‌ನಲ್ಲಿ ಹೀಗೆನ್ನಲಾಗಿದೆ:

"ಸತ್ಯವಿಶ್ವಾಸಿಗಳೇ, ಅಲ್ಲಾಹನ ಸಹಾಯಕರಾಗಿರಿ, ಮರ್ಯಮರ ಪುತ್ರ ಈಸಾ ಹವಾರಿಗಳೊಡನೆ 'ಅಲ್ಲಾಹನ ಕಡೆಗೆ ಕರೆ ನೀಡುವಲ್ಲಿ ನನ್ನ ಸಹಾಯಕರು ಯಾರಿದ್ದಾರೆ?'ಎಂದು ಹೇಳಿದ್ದಂತೆ. ಹವಾರಿಗಳು, 'ಅಲ್ಲಾಹನ ಸಹಾಯಕರಾಗಿ ನಾವಿದ್ದೇವೆ 'ಎಂದು ಉತ್ತರ ಕೊಟ್ಟಿದ್ದರು." (ಕುರ್‌ಆನ್: 61-14)

ಪ್ರವಾದಿಗಳು ಇಹಲೋಕ ಯಾತ್ರೆ ಮುಗಿಸಿದ ನಂತರ ಈ ಶ್ರೇಷ್ಠ ಜವಾಬ್ದಾರಿ ಮುಸ್ಲಿಮ್ ಸಮುದಾಯದ ಮೇಲೆ ಬೀಳುತ್ತದೆ. ಅವರು ಈ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಿದರೆ ಅಲ್ಲಾಹನ ಮುಂದೆ ಹೊಣೆಮುಕ್ತರಾಗುತ್ತಾರೆ ಮತ್ತು ಪರಲೋಕದಲ್ಲಿ ಸ್ವರ್ಗದ ಶಾಶ್ವತ ಅನುಗ್ರಹಗಳಿಗೆ ಹಾಗೂ ಇಹಲೋಕದಲ್ಲಿ ದೇವಸಹಾಯ ಮತ್ತು ಕಾರುಣ್ಯಕ್ಕೆ ಅರ್ಹರಾಗುತ್ತಾರೆ. ಯಾರು ಈ 'ಸತ್ಯದ ಸಾಕ್ಷ್ಯ'ದ ಹೊರತಾಗಿಯೂ ಸತ್ಯವನ್ನು ಸ್ವೀಕರಿಸುವುದಿಲ್ಲವೋ ಅವರು ದೊಡ್ಡ ಶಿಕ್ಷೆಗೆ ಗುರಿಯಾಗುತ್ತಾರೆ. ಆದರೆ ಸಮುದಾಯ ಮಾನವಕುಲದ ಮುಂದೆ ಮಾತು-ಕೃತಿಗಳ ಮೂಲಕ ಸತ್ಯದ ಸಾಕ್ಷ್ಯದ ಕರ್ತವ್ಯ ನಿರ್ವಹಿಸುವಲ್ಲಿ ಚ್ಯುತಿ ಮಾಡಿದರೆ ಜನರ ಸತ್ಯನಿಷೇಧ, ಬಹುದೇವಾರಾಧನೆ, ನಾಸ್ತಿಕತೆ, ಕಾಪಟ್ಯ ಮತ್ತು ದುರಾಚಾರಗಳಿಗೆ ಸಮುದಾಯವೇ ಹೊಣೆಯಾಗಿರುತ್ತದೆ. ಅದು ಇಹ ಮತ್ತು ಪರಲೋಕಗಳಲ್ಲಿ ಅದರ ಘೋರ ವಿಪತ್ತಿನಿಂದ ಪಾರಾಗದು.

ಪ್ರತಿಯೊಂದು ಪ್ರವಾದಿಯ ಬಳಿಕವೂ ಅವರು ರೂಪಿಸಿದ ಸಮುದಾಯದ ಹೊಣೆ ಇದಾಗಿತ್ತು. ಆದರೆ ಪ್ರವಾದಿ ಮುಹಮ್ಮದ್(ಸ) ಅವರು ರೂಪಿಸಿದ ಸಮುದಾಯದ ಹೊಣೆಗಾರಿಕೆಯು ಹಿಂದಿನ ಎಲ್ಲ ಸಮುದಾಯಗಳಿಗಿಂತಲೂ ಹಿರಿದಾದುದು. ಪ್ರವಾದಿ ಮುಹಮ್ಮದ್(ಸ) ಅವರು ಅಲ್ಲಾಹನ ಅಂತಿಮ ಸಂದೇಶವಾಹಕರಾಗಿರುವುದೇ ಇದಕ್ಕೆ ಕಾರಣ. ಅವರು ಪ್ರಳಯಕಾಲದ ತನಕ ಹುಟ್ಟುವ ಎಲ್ಲ ಮಾನವರ ಪ್ರವಾದಿಯಾಗಿದ್ದಾರೆ. ಜಗತ್ತಿನ ಎಲ್ಲ ಮಾನವರ ಮೋಕ್ಷ, ಇಹ-ಪರ ಯಶಸ್ಸು ಅವರ ಮೇಲೆ ವಿಶ್ವಾಸವಿರಿಸಿ ಅವರನ್ನು ಅನುಸರಿಸುವುದರಲ್ಲಿ ಅಡಕವಾಗಿದೆ. ಆದರೆ ವಸ್ತುತಃ ಅವರು ತಮ್ಮ ಕಾಲದ ಕೆಲವು ಮನುಷ್ಯರಿಗೆ (ಅರಬರಿಗೆ) ಮಾತ್ರ ಸಂದೇಶ ಮುಟ್ಟಿಸುವಲ್ಲಿ ಯಶಸ್ವಿಯಾದರು. ಈ ಕೆಲಸವನ್ನು ಕೂಡಾ ಅವರು ಒಬ್ಬಂಟಿಯಾಗಿ ನಿರ್ವಹಿಸಿದ್ದಲ್ಲ. ತಮ್ಮ ಕಾಲದ ಮುಸ್ಲಿಮ್

ಸಮುದಾಯದ-ಸಹಾಬಿಗಳ - ಸಹಭಾಗಿತ್ವ ಮತ್ತು ಸಹಕಾರದಿಂದ ನಿರ್ವಹಿಸಿದರು. ಖಂಡಿತವಾಗಿಯೂ ಅವರು ಸಮೀಪದ ಹಾಗೂ ದೂರದ ಸಾಮ್ರಾಜ್ಯಗಳ ತನಕವೂ ತಮ್ಮ ಸಂದೇಶವನ್ನು ಮುಟ್ಟಿಸಿದರು. ಆದರೆ ಜಗತ್ತಿನ ಎಲ್ಲ ಆಡಳಿತಗಾರರ ತನಕ ಅಥವಾ ಮಾನವ ಕುಲದ ಪ್ರತಿಯೊಬ್ಬ ಸದಸ್ಯನ ತನಕ ಅವರ ಸಂದೇಶ ತಲುಪಿರಲಿಲ್ಲ. ಅದು ಅವರಿಗೆ ಸಾಧ್ಯವೂ ಆಗಿರಲಿಲ್ಲ. ಈಗಂತೂ ಅವರು ಇಹಲೋಕ ತ್ಯಜಿಸಿ ಸಾವಿರದ ನಾಲ್ಕೂರು ವರ್ಷಗಳೇ ಸಂದಿವೆ. ಅಂದಿನಿಂದ ಹಿಡಿದು ಪ್ರಳಯ ಕಾಲದವರೆಗಿನ ಲೋಕದ ಕೋಟಿಗಟ್ಟಲೆ ಮಾನವರಿಗೆ ಆ ಧರ್ಮ ತಲಪುವ ಬಗೆ ಹೇಗೆ? ಅವರ ಪರಲೋಕ ಮೋಕ್ಷಕ್ಕೂ ಆ ಧರ್ಮವನ್ನು ಅಂಗೀಕರಿಸುವುದು ಅಗತ್ಯ ತಾನೇ? ಮಾನವ ಕುಲದ ಇಹಲೋಕದ ಯಶಸ್ಸು ಮತ್ತು ಪರಲೋಕದ ವಿಜಯಕ್ಕೆ ಅನಿವಾರ್ಯವಾದ ಆ ಸತ್ಯದ ಸಾಕ್ಷ್ಯವನ್ನು ವಹಿಸುವವರಾರು? ನಿಶ್ಚಯವಾಗಿಯೂ ಈ ಜವಾಬ್ದಾರಿ ಮುಸ್ಲಿಮ್ ಸಮುದಾಯದ್ದಾಗಿದೆ. ಭೂಮಿ ಇರುವಷ್ಟು ಕಾಲ ಅವರು ಅಲ್ಲಾಹನ ಸಂದೇಶವಾಹಕರ ಸಂದೇಶವನ್ನು ಎಲ್ಲ ಮಾನವರಿಗೆ ಮುಟ್ಟಿಸಬೇಕು ಮತ್ತು ಮಾತು-ಕೃತಿಗಳ ಮೂಲಕ ಅದರ ನಿರ್ಭಿಡ, ಲೋಪರಹಿತ ಮತ್ತು ನೈಜ ಸಾಕ್ಷ್ಯವನ್ನು ವಹಿಸಬೇಕು. ಮುಸ್ಲಿಮ್ ಸಮುದಾಯವು ಈ ಜವಾಬ್ದಾರಿಕೆಯನ್ನು ಈಡೇರಿಸಿದರೆ ಅಲ್ಲಾಹನ ಬಳಿ ಹೊಣೆಮುಕ್ತಗೊಳ್ಳುತ್ತದೆ. ಮುಸ್ಲಿಮ್ ಸಮುದಾಯ ತನ್ನ ಮಾತು-ಕೃತಿಗಳ ಮೂಲಕ ಪ್ರಸ್ತುತಪಡಿಸಿದಂತಹ ಸತ್ಯದೊಂದಿಗೆ ನೀವು ಯಾವ ರೀತಿ ವ್ಯವಹರಿಸಿದಿರಿ ಎಂದು ಸಾಮಾನ್ಯ ಮನುಷ್ಯರೊಂದಿಗೆ ಪ್ರಶ್ನಿಸಲಾಗುತ್ತದೆ. ಒಂದು ವೇಳೆ ಸಮುದಾಯ ಸತ್ಯದ ಸಾಕ್ಷ್ಯದ ಕರ್ತವ್ಯವನ್ನು ಈಡೇರಿಸುವಲ್ಲಿ ಲೋಪ ಮಾಡಿದರೆ ಅಸಂಖ್ಯ ಮನುಷ್ಯರ ಪಥಭ್ರಷ್ಟತೆ ಮತ್ತು ನಿಂದ್ಯತೆಯ ಹೊಣೆ ಮುಸ್ಲಿಮ್ ಸಮುದಾಯದ ಮೇಲೆ ಬೀಳುತ್ತದೆ ಮತ್ತು ಅವರು ಇಹ-ಪರಲೋಕಗಳಲ್ಲಿ ಅಲ್ಲಾಹನ ಶಿಕ್ಷೆಯಿಂದ ಖಂಡಿತವಾಗಿಯೂ ಪಾರಾಗಲಾರರು.

ಇಲ್ಲಿ ಒಂದು ತಪ್ಪು ತಿಳುವಳಿಕೆ ಮನಸ್ಸಿನಲ್ಲಿ ಉದ್ಭವಿಸುತ್ತದೆ. ಧರ್ಮದ ಸಂದೇಶ ಮತ್ತು ಸತ್ಯದ ಸಾಕ್ಷ್ಯದ ಪ್ರಜ್ಞೆಯಿರುವವರು ಮುಸ್ಲಿಮರ ಮುಂದೆ ತಮ್ಮ ಮಾತು-ಕೃತಿಗಳ ಮೂಲಕ ಸತ್ಯದ ಸಾಕ್ಷ್ಯವನ್ನು ನಿರ್ವಹಿಸಿದರೆ ಈ ಹೊಣೆಗಾರಿಕೆಯಿಂದ ಮುಕ್ತರಾಗುತ್ತಾರೆ. ಮುಸ್ಲಿಮೇತರರಿಗೆ ಸತ್ಯವಚನ ತಲಪುವ ಅಥವಾ ತಲಪದಿರುವ ಹಾಗೂ ಸತ್ಯದ ಮಾತು-ಕೃತಿಗಳ ಸಾಕ್ಷ್ಯ ಅವರ ಮುಂದೆ ನಿರ್ವಹಿಸಿದರೂ ನಿರ್ವಹಿಸದಿದ್ದರೂ ಅವರು ಹೊಣೆಮುಕ್ತರಾಗುತ್ತಾರೆ ಎಂಬುದೇ ಆ ತಪ್ಪು ತಿಳುವಳಿಕೆಯಾಗಿದೆ.

ಆದರೆ ಇದು ನಾವು ಮಾಡುವ ಅತಿ ದೊಡ್ಡ ಲೋಪವಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ಮುಸ್ಲಿಮ್ ಸಮುದಾಯದ ಜೀವನೋದ್ದೇಶ 'ಸತ್ಯದ ಸಾಕ್ಷ್ಯ'ವೆಂದೂ ಅವರನ್ನು 'ಶುಹದಾ'ದ (ಸಾಕ್ಷಿ) ಸ್ಥಾನದಲ್ಲಿ ನಿಲ್ಲಿಸಲಾಗಿದೆಯೆಂದೂ ವಿವರಿಸುತ್ತಾ ಮೂರು ವಿಭಾಗಗಳ ಕುರಿತು ಪ್ರಸ್ತಾವಿಸಲಾಗಿದೆ. 1. ಅಲ್ಲಾಹನ ಪ್ರವಾದಿಗಳು; ಸಮುದಾಯದ ಮುಂದೆ ಮಾತು-ಕೃತಿಗಳ ಮೂಲಕ ಸತ್ಯದ ಸಾಕ್ಷ್ಯ ವಹಿಸುವುದು ಅವರ ಹೊಣೆಗಾರಿಕೆಯಾಗಿದೆ. 2. ಮುಸ್ಲಿಮ್

ಸಮುದಾಯ; 'ಅನ್ನಾಸ್'ಅಥವಾ ಮಾನವ ಕುಲದ ಮುಂದೆ ಮಾತು-ಕೃತಿಗಳ ಮೂಲಕ ಸತ್ಯದ ಸಾಕ್ಷ್ಯವಹಿಸುವುದು ಅವರ ಕರ್ತವ್ಯವಾಗಿದೆ. 3. 'ಅನ್ನಾಸ್'ಅಥವಾ ಮಾನವರು. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ಇವರು ಮುಸ್ಲಿಮ್ ಸಮುದಾಯದ ಹೊರಗಿನ ವ್ಯಕ್ತಿಗಳು ಅಥವಾ ಮುಸ್ಲಿಮೇತರರು. ಇವರ ಮುಂದೆ ಮಾತು-ಕೃತಿಗಳ ಮೂಲಕ ಸತ್ಯದ ಸಾಕ್ಷ್ಯವಹಿಸುವುದು ಮುಸ್ಲಿಮರ ಹೊಣೆಗಾರಿಕೆಯಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ಅದನ್ನು ಈ ರೀತಿ ವಿವರಿಸಲಾಗಿದೆ.: "ಮತ್ತು ಇದೇ ರೀತಿ ನೀವು ಜಗತ್ತಿನ ಮಾನವರ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ನಾವು ನಿಮ್ಮನ್ನು ಒಂದು ಸುಮಧ್ಯ ಸಮುದಾಯವನ್ನಾಗಿ ಮಾಡಿದ್ದೇವೆ." (ಅಲ್ ಬಕರಃ-143) ಸೂರಃ ಹಜ್ಜ್‌ನ ವಾಕ್ಯಗಳು ಹೀಗಿವೆ.: "ಅಲ್ಲಾಹನು ಮೊದಲೂ ನಿಮ್ಮ ಹೆಸರನ್ನು 'ಮುಸ್ಲಿಮ್'ಎಂದಿಟ್ಟಿದ್ದನು ಮತ್ತು ಇದರಲ್ಲೂ (ಕುರ್‌ಆನ್‌ನಲ್ಲೂ ನಿಮಗೆ ಇದೇ ಹೆಸರಿದೆ.)ಇದು ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ ಮತ್ತು ನೀವು ಜನರ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ (ಆಗಿರುತ್ತದೆ)" (22:78)

ವಾಸ್ತವದಲ್ಲಿ 'ಶಹಾದತುಲ್ ಹಕ್' ಅಥವಾ 'ಸತ್ಯದ ಸಾಕ್ಷ್ಯ'ವು ಮುಸ್ಲಿಮೇತರರಿಗೆ ಸಂಬಂಧಿಸಿದಂತೆ ನಮ್ಮ ಮೇಲಿರುವ ಬಾಧ್ಯತೆಯಾಗಿದೆ. ಎಲ್ಲಿಯವರೆಗೆ ಅವರ ಎದುರು ಸತ್ಯದ ಸಾಕ್ಷ್ಯ ನಿರ್ವಹಿಸುವುದಿಲ್ಲವೋ ಅಲ್ಲಿಯವರೆಗೆ ಈ ಹೊಣೆಗಾರಿಕೆಯಿಂದ ಮುಸ್ಲಿಮ್ ಸಮುದಾಯ ಮುಕ್ತವಾಗಲಾರದು.

## ಧರ್ಮ ಸಂಸ್ಥಾಪನೆ

ಇದಕ್ಕೆ ಇನ್ನೊಂದು ಪಾರ್ಶ್ವವೂ ಇದೆ. ಇದನ್ನು ಇತರ ಪಾರ್ಶ್ವಗಳಿಗಿಂತ ಕಡಿಮೆ ಮಹತ್ವದ್ದೆನ್ನಲು ಸಾಧ್ಯವಿಲ್ಲ. ನಮ್ಮ ಗುರಿ ಧರ್ಮ ಸಂಸ್ಥಾಪನೆಯಾಗಿದೆ. ಪವಿತ್ರ ಕುರ್‌ಆನ್‌ನ ಪ್ರಕಾರ ಎಲ್ಲ ಪ್ರವಾದಿಗಳ ಹಾಗೂ ಅವರು ರೂಪಿಸಿದ ಸಮುದಾಯಗಳ ಪರಮ ಗುರಿ ಧರ್ಮ ಸಂಸ್ಥಾಪನೆಯೇ ಆಗಿತ್ತು.

"ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವನ್ನೇ ನಿಮಗಾಗಿಯೂ ನಿಶ್ಚಯಿಸಿ ಕೊಟ್ಟಿದ್ದಾನೆ ಮತ್ತು (ಮುಹಮ್ಮದರೇ) ಈಗ ನಾವು ಅದನ್ನೇ ದಿವ್ಯವಾಣಿಯ ಮೂಲಕ ನಿಮ್ಮ ಕಡೆಗೆ ಕಳುಹಿಸಿರುತ್ತೇವೆ.ಇದನ್ನೇ ನಾವು ಇಬ್ರಾಹೀಮ್, ಮೂಸಾ ಮತ್ತು ಈಸಾರಿಗೂ ಬೋಧಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದರಲ್ಲಿ ವಿಭಿನ್ನರಾಗದಿರಿ ಎಂಬ ಆದೇಶದೊಂದಿಗೆ." (ಕುರ್‌ಆನ್:42-13)

ಧರ್ಮಸಂಸ್ಥಾಪನೆಯು ತನ್ನ ಸಮಗ್ರ ವ್ಯಾಖ್ಯಾನಗಳ ದೃಷ್ಟಿಯಿಂದ ಮೂರು ಘಟಕಗಳನ್ನು ಒಳಗೊಂಡಿದೆ: 1.ಧರ್ಮದ ಸಂಪೂರ್ಣ ಮತ್ತು ಪ್ರಾಮಾಣಿಕ ಅನುಸರಣೆ. 2.ಧರ್ಮದ ಸಂದೇಶ ಪ್ರಚಾರ. 3 ಧರ್ಮವನ್ನು ಪ್ರಬಲಗೊಳಿಸುವ ಹೋರಾಟ. ಪ್ರಥಮ ಘಟಕದ ಸಂಬಂಧವು ಪ್ರತಿಯೊಬ್ಬ ಮುಸ್ಲಿಮನ ವೈಯಕ್ತಿಕ ಬದುಕಿಗೆ ಸಂಬಂಧಿಸಿದ್ದಾಗಿದೆ. ಎರಡನೆಯ ಘಟಕದ ಬಗ್ಗೆ ಹೇಳುವುದಾದರೆ ಅದರ ಅಭಿಸಂಬೋಧಿತರು ಮುಸ್ಲಿಮರಾಗಿದ್ದಾರೆಂಬುದು ವ್ಯಕ್ತ. ಈಗ ಅದರ

ತೃತೀಯ ಘಟಕಕ್ಕೆ ಬರೋಣ. ನಮ್ಮ ದೇಶದಲ್ಲಿ ಈ ಹೋರಾಟದ ಯಾವ್ಯಾವ ಸ್ವರೂಪಗಳು ಸಾಧ್ಯವಿದೆ ಎಂಬುದರ ಬಗ್ಗೆ ಚಿಂತನೆ ನಡೆಸೋಣ.

ಭಾರತದಲ್ಲಿ ಮುಸ್ಲಿಮರು ಹೆಚ್ಚೆಂದರೆ ಹತ್ತು* ಕೋಟಿಯಷ್ಟಿದ್ದಾರೆ. ಇದು ಒಟ್ಟು ಜನಸಂಖ್ಯೆಯ ಆರನೇ ಒಂದು ಭಾಗ. ಜನಸಂಖ್ಯೆಯನ್ನು ಬಿಟ್ಟು ಆರ್ಥಿಕ ಸ್ಥಿತಿ, ಶಿಕ್ಷಣ, ಸಂಘಟನೆ ಮತ್ತು ರಾಜಕೀಯ ದೃಷ್ಟಿಯಿಂದ ನೋಡಿದರೂ ಬಹುಸಂಖ್ಯಾಕರ ಎದುರು ಅವರು ತೀರಾ ಹಿಂದುಳಿದವರಾಗಿದ್ದಾರೆ. ಅವರು ನಿರ್ಣಾಯಕವಾದ ಸ್ಥಾನಮಾನವನ್ನು ಹೊಂದಿಲ್ಲ. ಇಲ್ಲಿ ಇಸ್ಲಾಮೀ ಕ್ರಾಂತಿಯ ವ್ಯಾವಹಾರಿಕ ಸ್ವರೂಪವೆಂದರೆ ಮುಸ್ಲಿಮೇತರರ ಪೈಕಿ ಒಂದು ದೊಡ್ಡ ಸಂಖ್ಯೆ ಇಸ್ಲಾಮಿನಿಂದ ಪ್ರಭಾವಿತರಾಗುವುದು. ಅವರಲ್ಲಿ ಇಸ್ಲಾಮೀ ಆಂದೋಲನದ ಕಾರ್ಯಕರ್ತರ ಚಾರಿತ್ರ್ಯ, ವ್ಯಕ್ತಿತ್ವ ಹಾಗೂ ಸಾಮರ್ಥ್ಯಗಳ ಬಗ್ಗೆ ಸದಭಿಪ್ರಾಯ ಮೂಡಬೇಕು. ಸದ್ಯ ಗೋಚರಿಸುವ ಇಸ್ಲಾಮೀ ಕ್ರಾಂತಿಯ ರೂಪ ಇದೊಂದೇ. ಮುಸ್ಲಿಮೇತರರನ್ನು ನಿರ್ಲಕ್ಷಿಸಿ ಕೇವಲ ಮುಸ್ಲಿಮರ ಶಕ್ತಿಯಿಂದಲೇ ಈ ರಾಷ್ಟ್ರದಲ್ಲಿ ಇಸ್ಲಾಮೀ ಕ್ರಾಂತಿ ಉಂಟಾಗುವ ಯಾವ ಸಾಧ್ಯತೆಯೂ ಗೋಚರಿಸುತ್ತಿಲ್ಲ. ಆದ್ದರಿಂದ ನಾವು ನಮ್ಮ ಗುರಿಯ ಬಗ್ಗೆ ಪ್ರಾಮಾಣಿಕರಾಗಿದ್ದೇವೆಂದಾದರೆ ದೇಶಬಾಂಧವರಿಗೆ ಧರ್ಮದ ಸಂದೇಶವನ್ನು ಮುಟ್ಟಿಸುವ ಅವಿಶ್ರಾಂತ ಪ್ರಯತ್ನ ಮಾಡಬೇಕು. ಇದು ಪ್ರಪ್ರಥಮ ಬೇಡಿಕೆಯಾಗಿದೆ. ಅನ್ಯಥಾ ಇಸ್ಲಾಮೀ ಕ್ರಾಂತಿಯನ್ನು ತರುವ ನಮ್ಮ ಕನಸು ಯಾವತ್ತೂ ನನಸಾಗಲಾರದು.

## ಇಸ್ಲಾಮೀ ಆಂದೋಲನ ವಿಶ್ವಮಾನವ ಆಂದೋಲನವಾಗಿದೆ

ಇನ್ನೊಂದು ಪಾರ್ಶ್ವವನ್ನೂ ಇಲ್ಲಿ ಮುಂದಿಡುವ ಅಗತ್ಯವಿದೆ. ಇಸ್ಲಾಮೀ ಆಂದೋಲನವು ಒಂದು ರಾಷ್ಟ್ರೀಯ ಆಂದೋಲನವಲ್ಲ. ಅದು ಇಸ್ಲಾಮಿನ ಜಾಗತಿಕ ಹಾಗೂ ವಿಶ್ವಮಾನವತಾ ಆಂದೋಲನವಾಗಿದೆ. ಇಸ್ಲಾಮ್ ಕೇವಲ ಮುಸ್ಲಿಮರ ಧರ್ಮವಲ್ಲ. ವಿಶ್ವದೊಡೆಯನ ಧರ್ಮವಾಗಿದೆ ಮತ್ತು ಅದು ಎಲ್ಲ ಮಾನವರಿಗೆ ಸೇರಿದ್ದಾಗಿದೆ. ಆದ್ದರಿಂದ ಯಾವ ಆಂದೋಲನವು ಕೇವಲ ಮುಸ್ಲಿಮರ ಮಾರ್ಗದರ್ಶನ ಮತ್ತು ಸುಧಾರಣೆ ಅಥವಾ ಅವರ ಸಮಸ್ಯೆಗಳ ಪರಿಹಾರದ ಬಗ್ಗೆ ಚಿಂತಿಸುತ್ತದೋ ಅದು ಇಸ್ಲಾಮೀ ಆಂದೋಲನ ಎನಿಸಿಕೊಳ್ಳಲಾರದು. ಈ ವಿಷಯವನ್ನು ಇಸ್ಲಾಮೀ ಆಂದೋಲನದ ಪ್ರಾರಂಭದಿಂದಲೂ ನಮಗೆ ಮನದಟ್ಟು ಮಾಡಲಾಗಿದೆ. ಇಸ್ಲಾಮೀ ಆಂದೋಲನವು ಮುಸ್ಲಿಮರು, ಮುಸ್ಲಿಮೇತರರೆಂಬ ಭೇದವಿಲ್ಲದೆ ಎಲ್ಲ ಮನುಷ್ಯರ ಸನ್ಮಾರ್ಗ ಮತ್ತು ಸುಧಾರಣೆಯನ್ನು ತನ್ನ ಲಕ್ಷ್ಯವಾಗಿಸಿಕೊಂಡಂತಹ ಚಳುವಳಿಯಾಗಿದೆ. ಅದರ ಮುಂದೆ ಕೇವಲ ಮುಸ್ಲಿಮರ ಸಾಮುದಾಯಿಕ ಸಮಸ್ಯೆ ಮಾತ್ರ ಇರುವುದಲ್ಲ. ಬದಲಾಗಿ ಎಲ್ಲ ಮಾನವರ ನೈಜ ಮಾನವೀಯ

* ಇದು 1979ರ ವೇಳೆಯಲ್ಲಿದ್ದ ಜನಸಂಖ್ಯೆ. ಈಗ ಸುಮಾರು 18 ಕೋಟಿಯಿದ್ದಾರೆ.

ಸಮಸ್ಯೆಗಳು ಅವರ ಮುಂದಿರಬೇಕು. ಆ ಆಂದೋಲನವು ಅವರೆಲ್ಲರ ಲೌಕಿಕ ಯಶಸ್ಸು ಹಾಗೂ ಪಾರತ್ರಿಕ ವಿಜಯಕ್ಕಾಗಿ ಪರಿಶ್ರಮ ನಡೆಸಬೇಕು. (ನೋಡಿರಿ, ಇಸ್ಲಾಮೀ ಆಂದೋಲನದ ಮೂಲಭೂತ ಸಾಹಿತ್ಯ- 'ಮುಸಲ್ಮಾನ್ ಔರ್ ಮೌಜೂದ ಸಿಯಾಸೀ ಕಶ್‌ಮಕಶ್'-ತೃತೀಯ ಭಾಗ ಮತ್ತು 'ಮಸ್‌ಅಲೆ ಕೌಮಿಯತ್'

ಈ ಮಾತು ನಿಜವೆಂದಾದರೆ-ಖಂಡಿತವಾಗಿಯೂ ಅದು ನಿಜವಾಗಿದೆ -ಈ ಆಂದೋಲನವು ಮುಸ್ಲಿಮರ ಸಾಮುದಾಯಿಕ ಆಂದೋಲನವಾಗಿ ಮಾರ್ಪಡುವುದನ್ನು ತಡೆಯಲು ಹಾಗೂ ಅದರ ಅಂತರ್‍ರಾಷ್ಟ್ರೀಯ ಮತ್ತು ವಿಶ್ವಮಾನವತಾ ಸ್ವರೂಪವನ್ನು ಪುನಸ್ಥಾಪಿಸಲು ನಾವು ಸಾಧ್ಯವಿರುವ ಎಲ್ಲಾ ಪ್ರಯತ್ನವನ್ನೂ ಮಾಡಬೇಕು. ಈ ಮಾತಿನ ನೈಜತೆಗೆ ಕುರ್‌ಆನ್ ಮತ್ತು ಸುನ್ನತ್‌ನ ಬಳಿಕ ಇಸ್ಲಾಮೀ ಆಂದೋಲನದ ಪ್ರಪ್ರಥಮ ಕೃತಿಯೇ ಸಾಕ್ಷಿಯಾಗಿದೆ. ಆದರೆ ಆರಂಭದಲ್ಲಿ ಈ ವಾಸ್ತವಿಕತೆಯನ್ನು ಪದೇ ಪದೇ ನೆನಪಿಸಿದ ಬಳಿಕವೂ ಭಾರತದ ಇಸ್ಲಾಮೀ ಆಂದೋಲನದ ಕಾರ್ಯವ್ಯಾಪ್ತಿ ಕಾರ್ಯತಃ ಮುಸ್ಲಿಮರ ಮಟ್ಟಿಗೆ ಸೀಮಿತಗೊಂಡಿದೆ. ಮಾತ್ರವಲ್ಲ, ಇಸ್ಲಾಮೀ ಆಂದೋಲನದ ಕಾರ್ಯಕರ್ತರು ಮುಸ್ಲಿಮರ ಸಮಸ್ಯೆಗಳಲ್ಲೇ ಬಿದ್ದು ಬಿಟ್ಟಿದ್ದಾರೆ. ಕಾರಣಗಳು ಏನೇ ಇರಬಹುದು. ಆದರೆ ನಿಜವಾದ ಪರಿಸ್ಥಿತಿ ಇದೇ ಆಗಿದೆ. ಮುಸ್ಲಿಮೇತರರೊಂದಿಗೆ ನಮ್ಮ ಅಭಿಸಂಬೋಧನೆ ನಾಮ ಮಾತ್ರವಾಗಿ ಬಿಟ್ಟಿದೆ. ನಮ್ಮ ಕಾರ್ಯವ್ಯಾಪ್ತಿ ನಿಜವಾಗಿಯೂ ಮತ್ತು ವ್ಯಾವಹಾರಿಕವಾಗಿಯೂ ಮುಸ್ಲಿಮ್ ಸಮುದಾಯ ಮಾತ್ರವಾಗಿದೆ. ನಾವು ಮುಸ್ಲಿಮರ ಸಮಸ್ಯೆಗಳ ನಿವಾರಣೆಗೆ ದಿನರಾತ್ರಿ ಚಿಂತಿಸುತ್ತೇವೆ. ಮುಸ್ಲಿಮೇತರರ ಸಮಸ್ಯೆಗಳನ್ನು ನಾವು ಕಾರ್ಯತಃ ಉಪೇಕ್ಷಿಸಿದೆವು. ಈ ವಸ್ತುಸ್ಥಿತಿಯು ಇಸ್ಲಾಮೀ ಆಂದೋಲನದ ಮಟ್ಟಿಗೆ ಆತ್ಮಹತ್ಯಾತ್ಮಕವಲ್ಲವೇ? ಇದೇ ಪ್ರವೃತ್ತಿ ಮುಂದುವರಿದರೆ ಇಸ್ಲಾಮೀ ಆಂದೋಲನ ಮುಸ್ಲಿಮರ ಒಂದು ಸಾಮುದಾಯಿಕ ಚಳವಳಿ ಎನಿಸಲಾರದೇ?

ಈ ಪರಿಸ್ಥಿತಿಯ ಏಕೈಕ ಉಪಶಮನವೆಂದರೆ ನಾವು ಮುಸ್ಲಿಮರಂತೆಯೇ ಮುಸ್ಲಿಮೇತರರನ್ನು ಕೂಡಾ ನಮ್ಮ ಅಭಿಸಂಬೋಧಿತರನ್ನಾಗಿಸಬೇಕು. ನಮ್ಮ ಸಂದೇಶ ಪ್ರಚಾರದ ವ್ಯಾಪ್ತಿ ಮತ್ತು ಕಾರ್ಯವ್ಯಾಪ್ತಿ ಎರಡರಲ್ಲೂ ಮುಸ್ಲಿಮ್ ಮತ್ತು ಮುಸ್ಲಿಮೇತರ ಸಮುದಾಯಗಳನ್ನು ಸೇರ್ಪಡೆಗೊಳಿಸಬೇಕು. ನಾವು ಪ್ರವಾದಿಗಳ ಮಾದರಿಯ ಬೆಳಕಿನಲ್ಲಿ ಸಂಪೂರ್ಣ ಮಾನವ ಕುಲದ ಮಟ್ಟಿಗೆ ಹಿತಾಕಾಂಕ್ಷಿಗಳೂ ನಂಬಿಗಸ್ತರೂ ಆಗಿ ಮಾರ್ಪಡಬೇಕು. ಯಾವ ರೀತಿ ಪ್ರವಾದಿ ಮುಹಮ್ಮದ್‌ರು(ಸ) ಸತ್ಯನಿಷೇಧಿಗಳು ಮತ್ತು ಬಹುದೇವಾರಾಧಕರ ಸುಧಾರಣೆ ಮತ್ತು ಅವರ ಇಹ-ಪರಗಳ ಯಶಸ್ಸಿಗಾಗಿ ಚಿಂತಿಸುತ್ತಿದ್ದರೋ ಯಾವ ರೀತಿ ಅವರ ದುಃಖಗಳಿಗಾಗಿ ರಾತ್ರಿ ಹಗಲೆನ್ನದೆ ಶ್ರಮಿಸುತ್ತಿದ್ದರೋ ಅದನ್ನು ನಾವು ಮಾದರಿಯಾಗಿಸಬೇಕು. "ಓ ಪೈಗಂಬರರೇ, ಇವರು ಈ ಬೋಧನೆಯ ಮೇಲೆ ವಿಶ್ವಾಸವಿರಿಸದಿದ್ದರೆ ಪ್ರಾಯಶಃ ನೀವು ಇವರ ಹಿಂದೆ ವ್ಯಥೆಯಿಂದ ನಿಮ್ಮ ಜೀವವನ್ನೇ ಕಳೆದುಕೊಳ್ಳುವವರಿದ್ದೀರಿ."

(ಕುರ್‌ಆನ್, 18:6)

ಅದೇ ರೀತಿ ಪ್ರವಾದಿವರ್ಯರ(ಸ) ಅನುಸರಣೆಯಲ್ಲಿ ಇಸ್ಲಾಮಿ ಆಂದೋಲನದ ಕಾರ್ಯಕರ್ತರು ಜನರ ಸುಧಾರಣೆಗಾಗಿ ಚಿಂತಿಸುತ್ತಲೂ ಅವರ ಪತನದ ಬಗ್ಗೆ ದುಃಖಿಸುತ್ತಲೂ ಇದ್ದರು. ಇಂತಹ ಸ್ಥಿತಿಯಲ್ಲಿ ಮಾತ್ರ ಇಸ್ಲಾಮಿ ಆಂದೋಲನದ ತಾತ್ವಿಕ ಹಾಗೂ ವಿಶ್ವಮಾನವತಾ ಸ್ವರೂಪವನ್ನು ಪುನಸ್ಥಾಪಿಸಲು ಸಾಧ್ಯವಾದೀತು. ಇಲ್ಲಿ ಚರ್ಚೆ ಮಾಡಲ್ಪಡುತ್ತಿರುವುದು ಇಸ್ಲಾಮಿ ಆಂದೋಲನದೊಂದಿಗೆ ಸಂಪರ್ಕವುಳ್ಳ ವ್ಯಕ್ತಿಗಳ ವ್ಯಾವಹಾರಿಕ ವರ್ತನೆಯ ಬಗ್ಗೆ ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಜಮಾಅತೆ ಇಸ್ಲಾಮಿ ಹಿಂದ್‌ನ 'ಚತುರ್ವಾರ್ಷಿಕ ಧೋರಣೆ ಮತ್ತು ಕಾರ್ಯಕ್ರಮಗಳ 'ಬಗ್ಗೆ ಹೇಳುವುದಾದರೆ ಅನೇಕ ಅವಧಿಗಳಿಂದ ಮುಸ್ಲಿಮರ ಸುಧಾರಣೆಯ ಜತೆಗೆ ಮುಸ್ಲಿಮೇತರರಲ್ಲಿ ಸಂದೇಶ ಪ್ರಚಾರಕ್ಕೂ, ಮುಸ್ಲಿಮರ ಸಮಸ್ಯೆಗಳ ಜತೆಗೆ ಮುಸ್ಲಿಮೇತರರ ಸಮಸ್ಯೆಗಳಿಗೂ ಸೂಕ್ತ ಮಹತ್ವವನ್ನು ನೀಡಲಾಗುತ್ತಿದೆ.

## ಇಸ್ಲಾಮಿ ಆಂದೋಲನದ ಹಿತಾಸಕ್ತಿ

ಇದು ಕೇವಲ ಆಂದೋಲನದ ತಾತ್ವಿಕ ಮತ್ತು ಸಾರ್ವತ್ರಿಕ ಸ್ವರೂಪವನ್ನು ಉಳಿಸುವ ಪ್ರಶ್ನೆಯಲ್ಲ. ವಸ್ತುತಃ ಇದು ಆಂದೋಲನದ ಹಿತಾಸಕ್ತಿಯ ಬೇಡಿಕೆಯಾಗಿದೆ. ಯಾವುದೇ ಸಾಮೂಹಿಕ ಆಂದೋಲನ ಕೇವಲ ಮುಸ್ಲಿಮರಿಗೆ ಮಾತ್ರ ಸೀಮಿತವಾಗಿ ಕಾರ್ಯಾಚರಿಸಿದರೆ ಮುಸ್ಲಿಮೇತರರಲ್ಲಿ ಅನುಮಾನ, ಆಶಂಕೆಗಳನ್ನು ಹುಟ್ಟಿಸುವ ಸಾಧನವಾದೀತು. ಪರಿಣಾಮವಾಗಿ ಅದು ಕೋಮುವಾದಿ ಬಣ್ಣ ಪಡೆಯುವ ಅಥವಾ ಕೋಮುವಾದದ ಬಿಲ್ಲೆ ಹಚ್ಚಲ್ಪಡುವುದರಿಂದ ಪಾರಾಗಲಾರದು. ಅದರಲ್ಲೂ ವಿಶೇಷವಾಗಿ ಆಂದೋಲನವು ತನ್ನನ್ನು ಕೇವಲ 'ಧಾರ್ಮಿಕ ವ್ಯವಹಾರ'ಗಳಿಗೆ ಸೀಮಿತಗೊಳಿಸದೆ ಸಾಮೂಹಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ನಡೆಸಿದಾಗ ಮತ್ತು ಮುಸ್ಲಿಮರ ಸಮಸ್ಯೆಗಳ ಪರಿಹಾರಕ್ಕೆ ಪರಿಶ್ರಮಿಸಿದಾಗ ಈ ಸಾಧ್ಯತೆ ಮತ್ತಷ್ಟು ಹೆಚ್ಚುತ್ತದೆ. ಈ ಪರಿಸ್ಥಿತಿಯಲ್ಲಿ ಮುಸ್ಲಿಮೇತರರು ನಿಮ್ಮ ಸಂಘಟನೆ ಮತ್ತು ಆಂದೋಲನದಿಂದ ದೂರ ಸರಿಯಬಹುದು. ಅದು ಸ್ವಾಭಾವಿಕವೂ ಹೌದು. ಭಾರತದ ಸಮಕಾಲೀನ ಪರಿಸ್ಥಿತಿಯು ಈ ಅಂತರವನ್ನು ಸುಲಭದಲ್ಲೇ ತಪ್ಪು ತಿಳಿವಳಿಕೆ, ಶತ್ರುತ್ವ ಮತ್ತು ದ್ವೇಷವನ್ನಾಗಿ ಪರಿವರ್ತಿಸಿ ಬಿಡಬಹುದು. ಮುಸ್ಲಿಮೇತರರು ಇಸ್ಲಾಮಿ ಆಂದೋಲನದ ವಿರೋಧ ಮತ್ತು ಖಂಡನೆಗೆ ಎದ್ದು ನಿಲ್ಲುವರು. ಆದರೆ ನೀವು ಸತ್ಯ ವಚನವನ್ನು ಮುಸ್ಲಿಮೇತರರಿಗೆ ತಲಪಿಸಲು ಪ್ರಯತ್ನಿಸಿದರೆ ಮತ್ತು ನಿಮ್ಮ ಮಾತು-ಕೃತಿಗಳಿಂದ, ಸದ್ವರ್ತನೆ ಮತ್ತು ಸನ್ನಡತೆಯ ಮೂಲಕ ನೀವು ಅವರ ನಾಯಕರಿಗಿಂತಲೂ ಹೆಚ್ಚು ಅವರ ಹಿತಾಕಾಂಕ್ಷಿಗಳಾಗಿದ್ದೀರಿ ಎಂಬುದನ್ನು ಮನಗಾಣಿಸಲು ಯಶಸ್ವಿಯಾದರೆ ಸಂಶಯದ ವಾತಾವರಣ ತಿಳಿಯಾಗಬಹುದು. ನೀವು ಅವರ ಲೌಕಿಕ ಯಶಸ್ಸು ಮತ್ತು ಪಾರತ್ರಿಕ ಮೋಕ್ಷದ ಬಗ್ಗೆ ಸದಾ ಚಿಂತಿಸುತ್ತಿದ್ದೀರಿ ಎಂಬುದು ಅವರಿಗೆ ಖಚಿತವಾಗಬೇಕು. ಇಸ್ಲಾಮಿ ಆಂದೋಲನ ಮುಸ್ಲಿಮರ ಒಂದು ಸಾಮುದಾಯಿಕ

ಆಂದೋಲನವಲ್ಲ. ಎಲ್ಲ ಮನುಷ್ಯರ ಐಹಿಕ ಮತ್ತು ಪಾರತ್ರಿಕ ಮೋಕ್ಷವೇ ಅದರ ಪರಮ ಲಕ್ಷ್ಯವಾಗಿದೆ ಎಂಬುದು ಮುಸ್ಲಿಮೇತರರಿಗೆ ಮನದಟ್ಟಾದರೆ ಸಂಶಯ, ಅನುಮಾನಗಳ ಪರಿಸ್ಥಿತಿ ಬಹುಮಟ್ಟಿಗೆ ನಿವಾರಣೆಯಾಗಬಹುದು. ಮಾತ್ರವಲ್ಲ ಮುಸ್ಲಿಮೇತರರ ಒಂದು ಗಣ್ಯ ವರ್ಗದ ಸದ್ಭಾವನೆ ಮತ್ತು ವಿಶ್ವಾಸವನ್ನು ಗಳಿಸಲು ಅದಕ್ಕೆ ಸಾಧ್ಯವಾದೀತು. ಇದರಿಂದ ಇಸ್ಲಾಮೀ ಆಂದೋಲನಕ್ಕೆ ಲಾಭ ಮತ್ತು ಬಲ ಸಿಗುವುದರಲ್ಲಿ ಸಂಶಯವಿಲ್ಲ.

## ಸಾಮುದಾಯಿಕ ಸಮಸ್ಯೆಗಳು

ಇಸ್ಲಾಮೀ ಆಂದೋಲನದ ತಾತ್ವಿಕ ಮತ್ತು ಸಾರ್ವತ್ರಿಕ ಸ್ಥಾನಮಾನವನ್ನು ನಾವು ವೈಚಾರಿಕವಾಗಿ ಅಂಗೀಕರಿಸಿದ್ದೇವೆ ಎಂಬುದು ನಿಜವೇ. ಆದರೆ ಸ್ವಾತಂತ್ರ್ಯೋತ್ತರ ಭಾರತದ ತೀವ್ರ ಸ್ವರೂಪದ ಮತ್ತು ಸೂಕ್ಷ್ಮ ಪರಿಸ್ಥಿತಿಗಳಲ್ಲಿ ಮುಸ್ಲಿಮರ ಗಂಭೀರ ಸಮಸ್ಯೆಗಳು ನಮ್ಮ ಮನಸ್ಸು, ಸಮಯ, ಸಾಮರ್ಥ್ಯ ಮತ್ತು ಸಂಪನ್ಮೂಲಗಳನ್ನು ಎಷ್ಟರ ಮಟ್ಟಿಗೆ ಆಕ್ರಮಿಸಿಬಿಟ್ಟಿದೆಯೆಂದರೆ ಮುಸ್ಲಿಮೇತರರ ಬಗ್ಗೆ ಗಮನ ಹರಿಸುವುದು ನಮ್ಮಿಂದ ಸಾಧ್ಯವಾಗಲಿಲ್ಲ. ಈ ರೀತಿಯ ನಿಬಿಡತೆಯ ಹೊರತಾಗಿಯೂ ಮುಸ್ಲಿಮರ ಸಮಸ್ಯೆಗಳು ಬಗೆಹರಿಯದೆ ಹಾಗೆಯೇ ಉಳಿದು ಬಿಟ್ಟಿವೆ. ವಾಸ್ತವದಲ್ಲಿ ಮುಸ್ಲಿಮರ ಸಮಸ್ಯೆಗಳ ಪೈಕಿ ಕೆಲವು ತಾತ್ಕಾಲಿಕವಾಗಿ ಬಗೆಹರಿದರೂ ಅವುಗಳ ಶಾಶ್ವತ ಪರಿಹಾರ ಅಷ್ಟು ಸುಲಭವಲ್ಲ. ಆ ಸಮಸ್ಯೆಗಳ ಬೇರುಗಳು ಅತ್ಯಂತ ಆಳಕ್ಕಿಳಿದಿವೆ. ಅವು ಯಾವುದೇ ಸರಕಾರ ಅಥವಾ ರಾಜಕೀಯ ಪಕ್ಷ ಪರಿಹರಿಸಲು ಸಾಧ್ಯವಿರುವಂತಹ ರಾಜಕೀಯ ಸಮಸ್ಯೆಯೇನಲ್ಲ. ಅದು ಮೂಲಭೂತವಾಗಿ ಒಂದು ಸಾಮಾಜಿಕ ಸಮಸ್ಯೆಯಾಗಿದೆ. ಮುಸ್ಲಿಮರ ಸಮಸ್ಯೆಗಳಿಗೆ ಅವರ ದೌರ್ಬಲ್ಯಗಳಷ್ಟೆ ಕಾರಣವಲ್ಲ. ಅವು ಹಿಂದೂ ಮುಸ್ಲಿಮ್ ಘರ್ಷಣೆಗಳ ಫಲಶ್ರುತಿಯಾಗಿದ್ದು ಈ ಸಂಘರ್ಷಗಳಿಗೆ ಶತಮಾನಕ್ಕೂ ಮಿಕ್ಕಿದ ಇತಿಹಾಸವಿದೆ. ಈ ಸಂಘರ್ಷಕ್ಕೆ ಕಾರಣವಾದ ಅಂಶಗಳನ್ನು ಈ ಕೆಳಗಿನಂತೆ ಸಂಕ್ಷೇಪಿಸಬಹುದು:

1. ಮುಸ್ಲಿಮರ ಇಸ್ಲಾಮೇತರ ಚಾರಿತ್ರ್ಯ. 2. ಅವರ ಇಸ್ಲಾಮೇತರ ಮತ್ತು ರಾಜಾಳ್ವಿಕೆಯ ಮೇಲೆ ಆಧಾರಿತವಾದ ಸರಕಾರಗಳು. 3. ಮುಸ್ಲಿಮೇತರರಿಗೆ ಇಸ್ಲಾಮನ್ನು ಪರಿಚಯಿಸುವಲ್ಲಿ ಅವರು ತೋರಿದ ಅಕ್ಷಮ್ಯ ನಿರ್ಲಕ್ಷ್ಯ. 4. ಮುಸ್ಲಿಮೇತರರ ಮಾನವೀಯ ಮತ್ತು ಇಸ್ಲಾಮೀ ಹಕ್ಕುಗಳನ್ನು ಈಡೇರಿಸುವಲ್ಲಿ ಅವರು ಎಸಗಿದ ಸತತ ತಪ್ಪುಗಳು.

ಆಂಗ್ಲರು ತಮ್ಮ ಸ್ವಾರ್ಥಕ್ಕಾಗಿ ಆವಿಷ್ಕರಿಸಿದ 'ಒಡೆದಾಳುವ' ನೀತಿಯಿಂದಲೂ ಹಲವಾರು ರೀತಿಯಲ್ಲಿ ಈ ಸಂಘರ್ಷವನ್ನು ಬೆಳೆಸಿದರು. ದಾಸ್ಯ ಕಾಲದ ಹಿಂದೂ ಮುಸ್ಲಿಮ್ ರಾಜಕೀಯ ಘರ್ಷಣೆಯಿಂದಲೂ ಇದು ಮತ್ತಷ್ಟು ತೀವ್ರಗೊಂಡಿತು. ಭಾರತ ವಿಭಜನೆ ಮತ್ತು ಎರಡೂ ರಾಷ್ಟ್ರಗಳ ನಡುವಣ ಶಾಶ್ವತ ಮತ್ತು ಭಯಾನಕ ಯುದ್ಧಗಳಿಂದ ಈ ಸಂಘರ್ಷವು ಅಪಾಯಕಾರಿ ಮಟ್ಟದ ತನಕ ವಿಷಲಿಪ್ತಗೊಂಡವು. ಕೋಮುವಾದಿ ಶಕ್ತಿಗಳು

ತಮ್ಮ ಗುಪ್ತ ಉದ್ದೇಶಗಳಿಗಾಗಿ ಇದನ್ನು ಮತ್ತಷ್ಟು ವೈಭವೀಕರಿಸಿ ಹಿಂದೂ ಮನಸ್ಸುಗಳಲ್ಲಿ ತುರುಕಿದರು. ಈ ರೀತಿ ಮುಸ್ಲಿಮರ ಭೂತಕಾಲದ ಮತ್ತು ಸಮಕಾಲೀನ ಚಿತ್ರಣವನ್ನು ತೀವ್ರವಾಗಿ ಮಸುಕುಗೊಳಿಸಿ ಅದನ್ನು ಅಪಾಯಕಾರಿ ಪ್ರಮಾಣದಲ್ಲಿ ಭೀಭತ್ಸಗೊಳಿಸಿದರು.

ಇವು ಸಾಮುದಾಯಿಕ ಸಮಸ್ಯೆಗಳ ನೈಜ ಕಾರಣಗಳಾಗಿವೆ. ನಾವು ಮುಸ್ಲಿಮರ ಸಮಸ್ಯೆಗಳನ್ನು ಎತ್ತಿಕೊಂಡು ಅದಕ್ಕಾಗಿ ಅಧಿಕಾರದಲ್ಲಿರುವವರು ಮತ್ತು ಮುಸ್ಲಿಮೇತರರ ಜತೆ ಘರ್ಷಣೆಗೆ ಇಳಿದು ಸಮಸ್ಯೆಯನ್ನು ಮತ್ತಷ್ಟು ಉಲ್ಬಣಗೊಳಿಸುವುದು ಈ ದುಸ್ಥಿತಿಗೆ ಪರಿಹಾರವೇ? ಅಥವಾ ಈ ಸಮಸ್ಯೆಯನ್ನು ಮತ್ತಷ್ಟು ಉಲ್ಬಣಗೊಳಿಸುವ ಬದಲಾಗಿ ಸತ್ಯಧರ್ಮದ ಸಾಕ್ಷಿಗಳಾಗಿ ಎದ್ದು ನಿಲ್ಲುವುದು, ಮುಸ್ಲಿಮರ ಸುಧಾರಣೆಯ ಜೊತೆಗೆ ಮುಸ್ಲಿಮೇತರರ ಮುಂದೆ ಮಾತು-ಕೃತಿಯ ಮೂಲಕ ಸತ್ಯದ ಸಾಕ್ಷ್ಯವಹಿಸುವುದು, ಮುಸ್ಲಿಮೇತರ ಪ್ರಜೆಗಳಲ್ಲಿ ಮುಸ್ಲಿಮರ ಕೆಟ್ಟ ಚಾರಿತ್ರ್ಯ, ಇಸ್ಲಾಮಿನ ಅಧ್ಯಯನದ ಅಭಾವ ಮತ್ತು ಆಂಗ್ಲರ ಹಾಗೂ ಕೋಮುವಾದಿಗಳ ಸುಳ್ಳು ಪ್ರಚಾರಗಳಿಂದಾಗಿ ಇಸ್ಲಾಮ್ ಮತ್ತು ಮುಸ್ಲಿಮರ ಬಗ್ಗೆ ಉಂಟಾಗಿರುವ ತಪ್ಪು ಕಲ್ಪನೆಗಳು ಮತ್ತು ಅನುಮಾನಗಳನ್ನು ನಿವಾರಿಸುವುದು, ಕೇವಲ ತಮ್ಮ ಸಮಸ್ಯೆಗಳ ಪರಿಹಾರದಲ್ಲೇ ನಿರತರಾಗುವ ಬದಲು ಎಲ್ಲ ದೇಶವಾಸಿಗಳನ್ನು ಚಿಂತೆಗೀಡು ಮಾಡಿರುವ ಸಮಸ್ಯೆಗಳ ನಿವಾರಣೆಗೆ ಶ್ರಮಿಸುವುದು ಮತ್ತು ಇಸ್ಲಾಮೀ ತತ್ವಗಳ ಬೆಳಕಿನಲ್ಲಿ ಆ ಸಮಸ್ಯೆಗಳ ಸರಿಯಾದ ಮತ್ತು ವ್ಯಾವಹಾರಿಕ ಪರಿಹಾರವನ್ನು ದೇಶಬಾಂಧವರ ಮುಂದಿಡುವುದು ಈ ಸಮಸ್ಯೆಗೆ ಸೂಕ್ತ ಪರಿಹಾರ ಮಾರ್ಗವಾಗಲಾರದೇ? ಈ ಮಾರ್ಗವನ್ನು ಅಳವಡಿಸಿದಾಗ ಮಾತ್ರ ದ್ವೇಷ, ಅಪನಂಬಿಕೆ, ಕಹಿ ವಾತಾವರಣ ನಿವಾರಣೆಯಾದೀತು. ದೇಶಬಾಂಧವರು ಇಸ್ಲಾಮ್ ಮತ್ತು ಇಸ್ಲಾಮೀ ಚಾರಿತ್ರ್ಯದಿಂದ ಪ್ರಭಾವಿತರಾಗುವರು. ಅದರಿಂದಾಗಿ ಹಿಂದೂ ಮುಸ್ಲಿಮ್ ಸಂಬಂಧಗಳು ಸುಧಾರಣೆಗೊಂಡು ಮುಸ್ಲಿಮರ ಸಮಸ್ಯೆಗಳು ಒಂದೊಂದಾಗಿ ಬಗೆಹರಿಯುವುದು. ದೇಶಬಾಂಧವರಲ್ಲಿ ಸಂದೇಶಪ್ರಚಾರ ಕಾರ್ಯ ನಡೆಸುವುದರಿಂದ ಮಾತ್ರ ಮುಸ್ಲಿಮರ ಸಮಸ್ಯೆಗಳು ಬಗೆಹರಿಯುವ ನಿರೀಕ್ಷೆಯಿಟ್ಟುಕೊಳ್ಳಬಹುದು. ಅನ್ಯಥಾ ಅವು ಬಗೆಹರಿಯುವ ಬದಲು ಮತ್ತಷ್ಟು ಜಟಿಲ ಗೊಂಡೀತು.

## ರಾಷ್ಟ್ರೀಯ ಸಮಸ್ಯೆಗಳು

ಯಾವ ರೀತಿ ಸಮುದಾಯದ ಸಮಸ್ಯೆಗಳು ನಮ್ಮ ಸಮಸ್ಯೆಗಳಾಗಿವೆಯೋ ಅದೇ ರೀತಿ ರಾಷ್ಟ್ರದ ಸಮಸ್ಯೆಗಳೂ ನಮ್ಮ ಸಮಸ್ಯೆಗಳಾಗಿವೆ. ನಾವೆಲ್ಲ ಒಂದೇ ಹಡಗಿನ ಯಾತ್ರಿಕರಾಗಿದ್ದೇವೆ. ಈ ಹಡಗು ಯಶಸ್ವಿಯಾಗಿ ಪಯಣ ಮುಗಿಸಿದರೆ ನಾವೆಲ್ಲ ಮುಕ್ತಿ ಹೊಂದುತ್ತೇವೆ. ಒಂದು ವೇಳೆ ಈ ಹಡಗು ಮುಳುಗಿ ಬಿಟ್ಟರೆ ನಾವೆಲ್ಲ ತಳ ಸೇರುತ್ತೇವೆ. ನಾವು ರಾಷ್ಟ್ರದ ಸಮಸ್ಯೆಗಳಿಂದ ಯಾವ ರೀತಿಯಲ್ಲೂ ಕಣ್ಣು ಮುಚ್ಚಿಕೊಳ್ಳುವಂತಿಲ್ಲ. ಯಾಕೆಂದರೆ ಇದು

ನಮ್ಮ ಜೀವನ ಮತ್ತು ಮರಣದ ಪ್ರಶ್ನೆ. ಅದರಲ್ಲೂ ಮುಸ್ಲಿಮರ ಸಾಮುದಾಯಿಕ ಆಂದೋಲನ ಎನಿಸಿಕೊಳ್ಳದೆ ತಾತ್ವಿಕ ಮತ್ತು ಸಾರ್ವತ್ರಿಕ ಚಳವಳಿ ಎಂದು ಗುರುತಿಸಲ್ಪಡುವ ಸಂಘಟನೆಯು ತನ್ನ ರಾಷ್ಟ್ರದ ಪ್ರಜೆಗಳ ಸಮಸ್ಯೆಗಳ ಕಡೆಗೆ ಕಣ್ಣು ಹರಿಸದಿರುವುದಾದರೂ ಹೇಗೆ ಸಾಧ್ಯ? ಅವರ ಸಮಸ್ಯೆಗಳು ಆ ಆಂದೋಲನದ ಸ್ವಂತ ಸಮಸ್ಯೆಗಳಾಗಿವೆ. ಆದ್ದರಿಂದ ಅವರ ಯಶಸ್ಸು ಮತ್ತು ಏಳಿಗೆಗಾಗಿ ಚಿಂತಿಸುವುದು ಅವರ ಸಂದೇಶದ ಸ್ವಾಭಾವಿಕ ಅಗತ್ಯವಾಗಿದೆ.

ದೇಶದ ಎಲ್ಲ ಕ್ಲಿಷ್ಟಕರ ಸಮಸ್ಯೆಗಳಿಗೂ ಇಸ್ಲಾಮ್ ಮಾತ್ರ ಏಕೈಕ ಪರಿಹಾರವೆಂದು ಜ್ಞಾನ ಮತ್ತು ಬುದ್ಧಿಯ ಆಧಾರದಲ್ಲಿ ನಾವು ನಂಬಿದ್ದೇವೆ. ಅಲ್ಲಾಹನು ಅವತೀರ್ಣಗೊಳಿಸಿದ ಜೀವನ ವಿಧಾನವನ್ನು ಬಿಟ್ಟು ಬೇರಾವ ವ್ಯವಸ್ಥೆಯೂ ಮನುಷ್ಯರ ಸಮಸ್ಯೆಗಳಿಗೆ ಪರಿಹಾರ ನೀಡಲಾರದು. ಮಾನವನ ಬಳಿ ಸಂಪೂರ್ಣ ಮಾನವ ಕೋಟಿಯ ಎಲ್ಲ ಸಮಸ್ಯೆಗಳಿಗೆ ಪರಿಹಾರ ರೂಪಿಸುವಂತಹ ಜ್ಞಾನವಾಗಲೀ ದೂರದೃಷ್ಟಿಯಾಗಲೀ ಇಲ್ಲ. ಎಲ್ಲರ ಸಮಸ್ಯೆಗಳಿಗೂ ಸಮಾನ ಮಹತ್ವ ನೀಡಲಿಕ್ಕೆ ಅಥವಾ ಎಲ್ಲರ ಜತೆಗೂ ನ್ಯಾಯ ಪಾಲಿಸಲಿಕ್ಕೆ ಬೇಕಾದ ವಿಶಾಲ ಮನೋಭಾವ ಖಂಡಿತವಾಗಿಯೂ ಆತನ ಬಳಿಯಿಲ್ಲ. ಪ್ರವಾದಿಗಳನ್ನು ಬಿಟ್ಟರೆ ಮನುಷ್ಯರ ಪೈಕಿ ಯಾವುದೇ ವ್ಯಕ್ತಿ ಅಥವಾ ಗುಂಪು ಸಮಗ್ರ ಜ್ಞಾನ ಇಟ್ಟುಕೊಂಡವರಲ್ಲ. ಅದೇ ರೀತಿ ಎಲ್ಲರನ್ನೂ ಒಂದೇ ರೀತಿ ಕಾಣುವ ಅಥವಾ ಎಲ್ಲರೊಂದಿಗೆ ಏಕಪ್ರಕಾರ ವ್ಯವಹರಿಸುವುದು ಕೂಡಾ ಯಾವುದೇ ವ್ಯಕ್ತಿ ಅಥವಾ ಗುಂಪಿಗೆ ಸಾಧ್ಯವಾಗುವಂಥದ್ದಲ್ಲ. ಕೇವಲ ದೇವನ ಜ್ಞಾನ ಮಾತ್ರ ಸಮಗ್ರವಾದುದು. ಆತನ ಬುದ್ಧಿವಂತಿಕೆ ಮಾತ್ರ ದೋಷರಹಿತವಾದದ್ದು. ಆತನಿಗೆ ಮಾತ್ರ ಮನುಷ್ಯನ ಪ್ರಕೃತಿ, ಮಾನವ ಕುಲದ ಉತ್ಥಾನ-ಪತನ, ಮನುಷ್ಯನ ಲೌಕಿಕ ಮತ್ತು ಪಾರತ್ರಿಕ ಜಯಾಪಜಯಗಳ ಮಾರ್ಗ ಯಾವುದೆಂಬುದು ಸ್ಪಷ್ಟವಾಗಿ ಗೊತ್ತು. ಆತ ಸಕಲ ಮಾನವರ ಸೃಷ್ಟಿಕರ್ತ, ಒಡೆಯ, ಆರಾಧ್ಯ ಮತ್ತು ಅಧಿಪತಿಯಾಗಿದ್ದಾನೆ. ಆತನ ಅಸ್ತಿತ್ವವು ಎಲ್ಲ ಕೊರತೆಗಳಿಂದ ಮುಕ್ತವಾಗಿದೆ. ಆತ ತನ್ನ ಧರ್ಮವನ್ನು ಅವತೀರ್ಣಗೊಳಿಸಿದ್ದರ ಉದ್ದೇಶ ಮಾನವರು ಅದನ್ನು ಅನುಸರಿಸುವ ಮೂಲಕ ಆತನ ಸಾಮೀಪ್ಯ ಮತ್ತು ಸಂತುಷ್ಟಿಗೆ ಪಾತ್ರರಾಗಿ ಸ್ವರ್ಗದ ಅನಂತ ಸುಖಗಳಿಗೆ ಅರ್ಹರಾಗಬೇಕೆಂಬುದು ಮಾತ್ರವಾಗಿರಲಿಲ್ಲ. ಪರಂತು ಮಾನವರು ನ್ಯಾಯ, ನೀತಿ, ಶಾಂತಿ ಮತ್ತು ಸಂರಕ್ಷಣೆಯಂತಹ ಸೌಭಾಗ್ಯಗಳನ್ನು ಪಡೆಯಬೇಕೆಂಬುದೂ ಅದರ ಹಿಂದೆ ಅಡಕವಾಗಿದ್ದ ಧ್ಯೇಯ. ಪವಿತ್ರ ಕುರ್‌ಆನ್ ಹೀಗೆ ಹೇಳುತ್ತದೆ:

"ನಾವು ನಮ್ಮ ಸಂದೇಶವಾಹಕರನ್ನು ಸುವ್ಯಕ್ತ ನಿದರ್ಶನಗಳು ಮತ್ತು ಸನ್ಮಾರ್ಗದರ್ಶನದೊಂದಿಗೆ ಕಳುಹಿಸಿದೆವು. ಜನರು ನ್ಯಾಯದಲ್ಲಿ ಸ್ಥಿರವಾಗಿ ನಿಲ್ಲಲೆಂದು ಅವರ ಜತೆ ಗ್ರಂಥ ಮತ್ತು ತಕ್ಕಡಿಯನ್ನು ಅವತೀರ್ಣಗೊಳಿಸಿದೆವು." (ಅಲ್‌ಹದೀದ್: 25)

ಜಗತ್ತಿನಲ್ಲಿ ನ್ಯಾಯ ಸ್ಥಾಪನೆಯಾಗಬೇಕು, ಎಲ್ಲ ಮನುಷ್ಯರ ಸಮಸ್ಯೆಗಳೂ ನ್ಯಾಯಯುತವಾಗಿ ಬಗೆಹರಿಯಬೇಕು ಎಂಬುದೇ ಸಂದೇಶವಾಹಕರು ಮತ್ತು ದೇವ

ಗ್ರಂಥಗಳನ್ನು ಕಳುಹಿಸುವುದರ ಮೂಲ ಉದ್ದೇಶ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಮಾತ್ರವಲ್ಲ ಪವಿತ್ರಕುರ್‌ಆನ್‌ನಿಂದ ಸ್ಪಷ್ಟವಾಗುವಂತೆ ಮುಸ್ಲಿಮ್ ಸಮುದಾಯದ ನೈಜ ಸ್ಥಾನಮಾನ ಅದು ನ್ಯಾಯವನ್ನು ಸ್ಥಾಪಿಸುವ ಸಮುದಾಯ ಎಂಬುದಾಗಿದೆ.:

"ಓ ಸತ್ಯವಿಶ್ವಾಸಿಗಳೇ, ನೀವು ನ್ಯಾಯದ ಧ್ವಜವಾಹಕರೂ ಅಲ್ಲಾಹನಿಗಾಗಿ ಸಾಕ್ಷ್ಯವಹಿಸುವವರೂ ಆಗಿರಿ. ನಿಮ್ಮ ನ್ಯಾಯ ಮತ್ತುಸಾಕ್ಷ್ಯವು ಸ್ವತಃ ನಿಮ್ಮ ಅಥವಾ ನಿಮ್ಮ ಮಾತಾಪಿತರ ಮತ್ತು ನಿಮ್ಮ ಸಂಬಂಧಿಕರ ವಿರುದ್ಧವಾಗಿದ್ದರೂ ಸರಿಯೇ. ಕಕ್ಷಿಯು ಧನಿಕನಿರಲಿ ಅಥವಾ ಬಡವನಿರಲಿ ನಿಮಗಿಂತ ಹೆಚ್ಚಾಗಿ ಅಲ್ಲಾಹನು ಅವರ ಹಿತಚಿಂತಕನಾಗಿದ್ದಾನೆ. ಆದ್ದರಿಂದ ನಿಮ್ಮ ಚಿತ್ತಾಸಕ್ತಿಯ ಅನುಸರಣೆಯಲ್ಲಿ ನ್ಯಾಯ ಪರಿಪಾಲನೆಯಿಂದ ಸರಿಯಬೇಡಿರಿ. ನೀವು ಗೂಢಾರ್ಥದ ಮಾತುಗಳನ್ನಾಡಿದರೆ ಅಥವಾ ಸತ್ಯದಿಂದ ನುಣುಚಿಕೊಂಡರೆ, ನಿಶ್ಚಯವಾಗಿಯೂ ನೀವು ಮಾಡುತ್ತಿರುವ ಕರ್ಮಗಳ ಅರಿವು ಅಲ್ಲಾಹನಿಗೆ ಇದೆ ಎಂಬುದು ನಿಮಗೆ ಚೆನ್ನಾಗಿ ತಿಳಿದಿರಲಿ." (ಕುರ್‌ಆನ್: 4-135)

ಆದರೆ ನಮ್ಮ ದೇಶದಲ್ಲಿ ನ್ಯಾಯ ಸ್ಥಾಪನೆಯಾಗುವ ಮತ್ತುಇಸ್ಲಾಮಿನ ಬೆಳಕಿನಲ್ಲಿ ದೇಶದ ಸಮಸ್ಯೆಗಳು ಪರಿಹಾರಗೊಳ್ಳುವ ಸಾಧ್ಯತೆ ಯಾವಾಗ ಮೂಡುತ್ತದೆ? ದೇಶಬಾಂಧವರಿಗೆ ವ್ಯಾಪಕ ಪ್ರಮಾಣದಲ್ಲಿ ಇಸ್ಲಾಮಿನ ಸಂದೇಶವನ್ನು ತಲುಪಿಸಿದಾಗ ಮಾತ್ರ ಇದು ಸಾಧ್ಯವಾದೀತು. ಇಸ್ಲಾಮ್ ಕೇವಲ ದೇವಸಾಮೀಪ್ಯ ಮತ್ತು ಪಾರತ್ರಿಕ ಯಶಸ್ಸಿನ ಮಾರ್ಗ ಮಾತ್ರವಲ್ಲ. ಮಾನವ ಕೋಟಿಯ ಎಲ್ಲ ಕ್ಲಿಷ್ಟ ಸಮಸ್ಯೆಗಳಿಗೂ ಇದರಲ್ಲಿ ಪರಿಹಾರವಿದೆ ಮತ್ತು ನ್ಯಾಯದ ಸ್ಥಾಪನೆ ಇದರಿಂದ ಮಾತ್ರ ಸಾಧ್ಯವೆಂಬುದು ದೇಶಬಾಂಧವರಿಗೆ ಮನದಟ್ಟಾಗಬೇಕು.

## ಎಡರು ತೊಡರುಗಳು

ಇನ್ನು ಈ ಹಾದಿಯಲ್ಲಿರುವ ನೈಜ ಮತ್ತು ಕಾಲ್ಪನಿಕ ಅಡೆತಡೆಗಳ ಬಗ್ಗೆ ಸ್ವಲ್ಪ ನೋಡೋಣ.

ಸಂಪರ್ಕ ಇಲ್ಲದಿರುವುದು ಸಾಮಾನ್ಯವಾಗಿ ಹೇಳಲಾಗುವ ಮತ್ತು ಅನುಭವ ವೇದ್ಯವಾಗಿರುವ ಒಂದು ದೊಡ್ಡ ಕೊರತೆಯಾಗಿದೆ. ದೇಶಬಾಂಧವರ ಜತೆ ನಮಗೆ ಸಂಪರ್ಕವೇ ಇಲ್ಲ ಎಂದ ಮೇಲೆ ಸಂದೇಶ ಪ್ರಚಾರದ ಕರ್ತವ್ಯವನ್ನು ನೆರವೇರಿಸುವುದು ಹೇಗೆ? ಇಂತಹ ನೆಪವನ್ನು ನಾವು ಹಲವೊಮ್ಮೆ ಕೇಳುತ್ತೇವೆ. ಕೇಳದಿದ್ದರೂ ಹಲವರ ಮನಸ್ಸಿನಲ್ಲಂತೂ ಅದು ಖಂಡಿತವಾಗಿಯೂ ಇದೆ. ಆದರೆ ಯಾವುದೇ ಆಂದೋಲನದ ಧ್ವಜವಾಹಕರ ಮಟ್ಟಿಗೆ ಈ ರೀತಿಯ ನೆಪ ಅಕ್ಷಮ್ಯ ಪಾಪವಾಗಿದೆ. ಆಂದೋಲನ ಕಾರ್ಯಕರ್ತರು ಸಂಪರ್ಕರಾಹಿತ್ಯದ ನೆಪ ಹೇಳಿ ಮನೆಯಲ್ಲಿ ಕುಳಿತುಕೊಳ್ಳುವಂತಿಲ್ಲ. ಅವರಂತೂ ತಮ್ಮ ಸಂಕಲ್ಪಕ್ಕೆ ಬದ್ಧರಾಗಿ ಆಂದೋಲನದ ಹಿತ ಮತ್ತು ತಮ್ಮ ಕಾರ್ಯಕ್ರಮಗಳ ಪೂರ್ತೀಕರಣಕ್ಕಾಗಿ ಆದಷ್ಟು ಹೆಚ್ಚು ಅಪರಿಚಿತ ಜನರ ಬಳಿಗೆ ತಲಪುತ್ತಾರೆ. ಮಾತ್ರವಲ್ಲ ಅವರೊಂದಿಗಿನ ಸಂಪರ್ಕವನ್ನು ಹೆಚ್ಚಿಸಿಕೊಳ್ಳುತ್ತಾರೆ. ಒಂದು ವೇಳೆ ಅವರು ಹಾಗೆ ಮಾಡುವುದಿಲ್ಲವೆಂದಾದರೆ ಅವರು ಯಾವುದೇ ಆಂದೋಲನದ ಧ್ವಜವಾಹಕರಲ್ಲ ಎಂಬುದನ್ನು ಖಚಿತವಾಗಿ ತಿಳಿದು ಕೊಳ್ಳಬೇಕು. ಅವರಂತೂ ಕೇವಲ ಯಾವುದೋ ಜಡ್ಡುಗಟ್ಟಿದ

ವಿಚಾರಧಾರೆಯ ಔಪಚಾರಿಕ ಮತ್ತು ಆತ್ಮವಿಲ್ಲದ ಅನುಯಾಯಿಗಳೆನಿಸಿಕೊಳ್ಳಬಹುದು.

ಆದರೆ ಸಂಪರ್ಕ ಇಲ್ಲದಿರುವ ನೆಪ ವಸ್ತುತಃ ಸಮರ್ಪಕವಾದುದಲ್ಲ. ಭೌತಿಕ ವ್ಯವಹಾರಗಳನ್ನು ನಿರ್ವಹಿಸುವ ವಿಚಾರದಲ್ಲಿ ದೇಶವಾಸಿಗಳ ಜತೆ ಸಂಪರ್ಕ ಬೆಳೆಸುವುದು ನಮಗೆ ಅನಿವಾರ್ಯವಾಗುತ್ತದೆ. ಈ ಸಂಬಂಧವನ್ನು ಇನ್ನಷ್ಟು ವಿಸ್ತರಿಸುವ ಅವಕಾಶವಂತೂ ಇದ್ದೇ ಇದೆ. ಅಂತೆಯೇ ಅದನ್ನು ಹೆಚ್ಚು ನಿಕಟ ಮತ್ತು ಗಾಢಗೊಳಿಸಬಹುದಾಗಿದೆ. ತುರ್ತು ಪರಿಸ್ಥಿತಿಗೀತ ಮುಂಚೆಯೂ ಜಮಾಅತ್‌ನ ವಿವಿಧ ಕಾರ್ಯಕ್ರಮಗಳಿಂದಾಗಿ ಮುಸ್ಲಿಮೇತರರ ಜತೆಗಿನ ನಮ್ಮ ಸಂಬಂಧದಲ್ಲಿ ಬಹಳ ವೃದ್ಧಿಯಾಗಿತ್ತು. ಜಮಾಅತ್‌ನ ಮೇಲೆ ನಿಷೇಧ ಹಾಕಿದ ಬಳಿಕ ಮುಸ್ಲಿಮೇತರರಲ್ಲಿ ಜಮಾಅತ್‌ನ ಕುರಿತು ಚರ್ಚೆ ವ್ಯಾಪಕಗೊಂಡಿತು. ಪತ್ರಿಕೆ ಓದುವ, ರೇಡಿಯೋ ಆಲಿಸುವ ಪ್ರತಿ ಮುಸ್ಲಿಮೇತರರಿಗೂ ಜಮಾಅತೆ ಇಸ್ಲಾಮೀ ಒಂದು ಜಿಜ್ಞಾಸೆಯ ವಸ್ತುವಾಯಿತು. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ದೇಶದಾದ್ಯಂತ ಸಹಸ್ರಾರು ಮುಸ್ಲಿಮೇತರರ ಜತೆ ಜೈಲಿನ ಒಳಗಡೆ ಮತ್ತು ಹೊರಗಡೆ ಸಂಪರ್ಕ ಬೆಳೆಯಿತು. ಮಾತ್ರವಲ್ಲ ಬಹಳಷ್ಟು ಮುಸ್ಲಿಮೇತರರು ಜಮಾಅತ್ ಕಾರ್ಯಕರ್ತರ ಇಸ್ಲಾಮೀ ಚಾರಿತ್ರ್ಯ, ಸಭ್ಯವರ್ತನೆ ಮತ್ತು ಅವರ ಸಂದೇಶ ಪ್ರಚಾರದ ಸಂಕಲ್ಪದಿಂದ ಪ್ರಭಾವಿತರಾದರು. ಈಗ ಪರಿಸ್ಥಿತಿ ಹೇಗಿದೆಯೆಂದರೆ ಅಲ್ಪ ಪರಿಶ್ರಮದಿಂದ ಜಮಾಅತ್‌ನ ಸಭೆಗಳಿಗೆ ಮುಸ್ಲಿಮೇತರರು ದೊಡ್ಡ ಪ್ರಮಾಣದಲ್ಲಿ ಬರುತ್ತಾರೆ. ಜಮಾಅತ್‌ನ ಸಂದೇಶದಿಂದ ಪ್ರಭಾವಿತರಾಗುತ್ತಾರೆ. ಜಮಾಅತ್‌ನ ಕೆಲಸಗಳಿಗೆ ತಮ್ಮ ಸಹಕಾರವನ್ನೂ ಘೋಷಿಸುತ್ತಾರೆ. ಸಂಪರ್ಕ ಎಂದರೆ ಇದಲ್ಲದೆ ಮತ್ತಿನ್ನೇನು! ಇನ್ನು ಜಮಾಅತೆ ಇಸ್ಲಾಮೀಯ ಧೋರಣೆ ಮತ್ತು ಕಾರ್ಯಕ್ರಮಗಳಲ್ಲಿ ಪ್ರಸ್ತಾಪಿಸಲಾಗಿರುವ ಹಲವಾರು ಕಾರ್ಯಕ್ರಮಗಳನ್ನು ನಿರ್ವಹಿಸಿದರೆ ಮುಸ್ಲಿಮೇತರರೊಂದಿಗಿನ ಸಂಬಂಧ ಇನ್ನಷ್ಟು ನಿಕಟ, ಭದ್ರ ಮತ್ತು ವ್ಯಾಪಕಗೊಳ್ಳುವ ಸಾಧ್ಯತೆ ಇದೆ. ಇದು ವಸ್ತುಸ್ಥಿತಿ. ನಾವು ಈಗಲೂ ಸಂಪರ್ಕ ಇಲ್ಲದಿರುವುದರ ಬಗ್ಗೆ ಕೊರಗುತ್ತಿದ್ದರೆ ಅದು ನಮ್ಮ ದೌರ್ಬಲ್ಯ ಮತ್ತು ನಿಷ್ಕ್ರಿಯತೆ ಮಾತ್ರ. ನಿಜವಾಗಿ ಇಷ್ಟು ಒಳ್ಳೆಯ ಸಂಬಂಧ ಮತ್ತು ಅವಕಾಶಗಳು ಎಂದೂ ಉಂಟಾಗಿರಲಿಲ್ಲ.

## ಸಂದೇಶ ಪ್ರಚಾರ ನಿಷ್ಪ್ರಯೋಜಕ

ಇನ್ನೊಂದು ದೊಡ್ಡ ತೊಡಕೆಂದರೆ ಬಹಳಷ್ಟು ಮಂದಿ ಈ ಕೆಲಸವನ್ನು ವ್ಯರ್ಥ ಮತ್ತು ನಿಷ್ಪ್ರಯೋಜಕವೆಂದು ಭಾವಿಸಿರುವುದು. ಅವರ ಪ್ರಕಾರ ಈ ಕೆಲಸ ಯಾವುದೇ ಫಲವನ್ನು ನೀಡುವುದಿಲ್ಲ. ನಿಷ್ಪ್ರಯೋಜಕ ಮತ್ತು ಪರಿಣಾಮರಹಿತ ಕಾರ್ಯವನ್ನು ಯರಾದರೂ ಯಾಕೆ ಮಾಡಬೇಕು?

ಆದರೆ ನಾವು ಇಂತಹ ತೀರ್ಮಾನಕ್ಕೆ ಹೇಗೆ ತಲಪಿದೆವು ಎಂಬುದು ಪ್ರಶ್ನೆ. ನಾವು ದೇಶಬಾಂಧವರ ಮಧ್ಯೆ ವರ್ಷಗಟ್ಟಲೆ ಕೆಲಸ ಮಾಡಿಯೂ ಫಲಿತಾಂಶ ಸಿಕ್ಕಿಲ್ಲವೇ? ಅಥವಾ

ಸಂದೇಶ ಪ್ರಚಾರದ ಪರಿಶ್ರಮಕ್ಕೆ ಇಳಿಯದೆ ಮನೆಯಲ್ಲಿ ಕುಳಿತುಕೊಂಡು ಒಂದು ತೀರ್ಮಾನಕ್ಕೆ ಬಂದು ಬಿಟ್ಟಿದ್ದೇವೆಯೇ? ಎರಡನೆಯ ಮಾತೇ ನಿಜ ಎಂಬುದನ್ನು ಅಳುಕಿಲ್ಲದೆ ಹೇಳಬಹುದು. ನಾವು ಸಂದೇಶ ಪ್ರಚಾರ ಕೆಲಸಕ್ಕಿಳಿಯದೆ, ಸತತ ಪ್ರಯತ್ನ ನಡೆಸದೆಯೇ ಅದೊಂದು ನಿಷ್ಪ್ರಯೋಜಕ ಕೆಲಸವೆಂಬ ತೀರ್ಮಾನಕ್ಕೆ ಬಂದಿದ್ದೇವೆ. ಆದರೆ ನಾವು ಬೌದ್ಧಿಕವಾಗಿ, ಧಾರ್ಮಿಕವಾಗಿ, ನೈತಿಕವಾಗಿ, ಕ್ರಿಯಾತ್ಮಕವಾಗಿ ಅಥವಾ ಇನ್ನಾವುದೇ ದೃಷ್ಟಿಯಿಂದಲೂ ಕಾರ್ಯರಂಗಕ್ಕಿಳಿಯದೆ ಇಂತಹ ತೀರ್ಮಾನ ಕೈಗೊಳ್ಳುವುದು ಮತ್ತು ಅದರ ಆಧಾರದಲ್ಲಿ ನಮ್ಮ ಕರ್ತವ್ಯ ಮಾತ್ರವಲ್ಲ ಜೀವನೋದ್ಧೇಶದಿಂದಲೇ ವಿಮುಖರಾಗುವುದು ಎಷ್ಟರ ಮಟ್ಟಿಗೆ ಸರಿ?

ಸತ್ಯ ಸಂದೇಶದ ಸತತ ಪರಿಶ್ರಮದ ಹೊರತಾಗಿಯೂ ಯಾವನೇ ವ್ಯಕ್ತಿ ಅದರಿಂದ ಪ್ರಭಾವಿತವಾಗಲಿಲ್ಲ ಎಂದಿಟ್ಟುಕೊಳ್ಳೋಣ. ಆಗ ನಮ್ಮ ಪ್ರಯತ್ನ ನಿಷ್ಫಲವಾಯಿತೆಂದು ಅರ್ಥವೇ? ನಮ್ಮ ಪರಿಶ್ರಮಗಳು ಪರಿಣಾಮರಹಿತವಾದವು ಎಂದು ತಿಳಿಯಬೇಕೇ? ಇಲ್ಲ. ಖಂಡಿತವಾಗಿಯೂ ಹಾಗಾಗಲಾರದು. ನಮ್ಮ ಕೆಲಸ ಜವಾಬ್ದಾರಿಯನ್ನು ಸರಿಯಾಗಿ ನಿಭಾಯಿಸುವುದು ಮಾತ್ರ. ನಾವು ನಮ್ಮ ಹೊಣೆಯನ್ನು ನಿರ್ವಹಿಸಿದರೆ ಖಂಡಿತವಾಗಿಯೂ ಯಶಸ್ವಿಯಾದೆವು ಮತ್ತು ಅಲ್ಲಾಹನ ಸಂತೃಪ್ತಿ ಮತ್ತು ಪಾರತ್ರಿಕ ಯಶಸ್ಸಿಗೆ ಅರ್ಹರಾದೆವು ಎಂದರ್ಥ. ಇದಕ್ಕಿಂತ ದೊಡ್ಡ ಪರಿಣಾಮ ಯಾವುದಿದೆ ಹೇಳಿ? ಯಾರು ಈ ಸಂದೇಶವನ್ನು ನಿರಾಕರಿಸಿದರೋ ಅವರು ತಮ್ಮ ನಿರಾಕರಣೆಗೆ ಅಲ್ಲಾಹನ ಮುಂದೆ ಹೊಣೆಗಾರರಾಗುವರು.

ಪ್ರವಾದಿ ಮುಹಮ್ಮದ್‌ರನ್ನು(ಸ) ಅಭಿಸಂಭೋದಿಸುತ್ತಾ ಅಲ್ಲಾಹನು ಪವಿತ್ರಕುರ್‌ಆನ್‌ನಲ್ಲಿ ಹೀಗೆ ಹೇಳುತ್ತಾನೆ.: "... ಸಂದೇಶವನ್ನು ಮುಟ್ಟಿಸುವುದು ನಿಮ್ಮ ಕೆಲಸ ಮತ್ತು ವಿಚಾರಣೆ ನಡೆಸುವುದು ನಮ್ಮ ಕೆಲಸ." (ಅರ್ರಅ್‌ದ್: 40)

ಅರ್ಥಾತ್ ನೀವು ನಿಮ್ಮ ಪ್ರಯತ್ನ ಮುಂದುವರಿಸಿರಿ. ಪರಿಣಾಮವನ್ನು ಅಲ್ಲಾಹನಿಗೆ ಬಿಟ್ಟುಬಿಡಿರಿ. ಸತ್ಯನಿಷೇಧಿಗಳ ವಿಚಾರಣೆಗೆ ಅವನು ಸಮರ್ಥನಿದ್ದಾನೆ. ಎಲ್ಲ ವ್ಯವಹಾರಗಳ ತೀರ್ಮಾನ ಮತ್ತು ಫಲಿತಾಂಶ ಆತನ ಕೈಯಲ್ಲಿದೆ:

"ಸಕಲ ವ್ಯವಹಾರಗಳ ಅಂತಿಮ ಪರಿಣಾಮವು ಅಲ್ಲಾಹನ ಕೈಯಲ್ಲಿದೆ" (ಅಲ್‌ಹಜ್ಜ್-41)

ನಮ್ಮ ಮಾತು ಬಿಡಿ. ಸ್ವತಃ ಅಲ್ಲಾಹನ ಶ್ರೇಷ್ಠ ಪ್ರವಾದಿಯಾದ ಮುಹಮ್ಮದ್(ಸ) ಅವರಿಗೂ ತಾವು ಬಯಸುವ ವ್ಯಕ್ತಿಗಳಿಗೆ ಸನ್ಮಾರ್ಗದ ಸೌಭಾಗ್ಯ ಕರುಣಿಸುವ ಸಾಮರ್ಥ್ಯವಿರಲಿಲ್ಲ. ಸನ್ಮಾರ್ಗದರ್ಶನ ನೀಡುವುದು ಅಲ್ಲಾಹನ ಇಚ್ಛೆಗೆ ಬಿಟ್ಟದ್ದು. ಆತ ಯಾರಿಗೆ ಬೇಕೋ ಅವರಿಗೆ ನೇರ ಮಾರ್ಗ ತೋರಿಸುತ್ತಾನೆ. ತನಗಿಷ್ಟ ಬಂದವರನ್ನು ಅದರಿಂದ ವಂಚಿಸುತ್ತಾನೆ. ಪವಿತ್ರ ಕುರ್‌ಆನ್‌ನಲ್ಲಿ ಪ್ರವಾದಿವರ್ಯರನ್ನು(ಸ) ಸಂಬೋಧಿಸಿ ಹೀಗೆನ್ನಲಾಗಿದೆ:

"ಪ್ರವಾದಿಗಳೇ, ನೀವಿಚ್ಛಿಸಿದವರಿಗೆ ಸನ್ಮಾರ್ಗ ನೀಡಲು ನಿಮ್ಮಿಂದಾಗದು. ಆದರೆ ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗ ನೀಡುತ್ತಾನೆ. ಅವನು ಸನ್ಮಾರ್ಗ ಸ್ವೀಕರಿಸುವವರನ್ನು

ಚೆನ್ನಾಗಿ ಅರಿತಿರುತ್ತಾನೆ." (ಅಲ್‌ಕಸಸ್: 56)

ಪ್ರವಾದಿವರ್ಯರ(ಸ) ಎಲ್ಲ ಪ್ರಯತ್ನ ಮತ್ತು ಪ್ರಾರ್ಥನೆಗಳ ಹೊರತಾಗಿಯೂ ಅವರ ಅತ್ಯಂತ ಪ್ರೀತಿಯ ದೊಡ್ಡಪ್ಪ, ಇಸ್ಲಾಮ್ ಮತ್ತು ಮುಸ್ಲಿಮರ ಹಿತಾಕಾಂಕ್ಷಿಯಂತಿದ್ದ ಅಬೂತಾಲಿಬ್ ಇಸ್ಲಾಮ್ ಸ್ವೀಕರಿಸಲಿಲ್ಲ ಎಂಬುದು ಚರಿತ್ರೆಯ ಒಂದು ವಾಸ್ತವಿಕ ಘಟನೆಯಾಗಿದೆ. ಅಬೂತಾಲಿಬ್‌ರು ಕೊನೆಯ ಕ್ಷಣದಲ್ಲೂ ಪ್ರವಾದಿವರ್ಯರ(ಸ) ಮನವಿಯನ್ನು ಪುರಸ್ಕರಿಸಲಿಲ್ಲ. ಕೊನೆಗೆ ತಮ್ಮ ತಾತ ಮುತ್ತಾತಂದಿರ ಧರ್ಮದ ಅನುಯಾಯಿಯಾಗಿಯೇ ಅವರು ಇಹಲೋಕ ತ್ಯಜಿಸಿದರು.

ಹ.ನೂಹ್ (ಅ) ಅವರು ಒಂಬೈನೂರ ಐವತ್ತು ವರ್ಷಗಳ ಕಾಲ ಹಗಲುರಾತ್ರೆಯೆನ್ನದೆ ಸತ್ಯಸಂದೇಶ ಪ್ರಚಾರದ ಪರಿಶ್ರಮವನ್ನು ಮುಂದುವರಿಸಿದರು. ಆದರೆ ಕೇವಲ ಕೆಲವೇ ಮಂದಿಯ ಹೊರತು ಇಡೀ ಸಮುದಾಯ ಅವರ ಸಂದೇಶವನ್ನು ನಿರಾಕರಿಸಿತು. ಪರಿಣಾಮವಾಗಿ ಒಂದು ಇಡೀ ಜನಾಂಗವೇ ಜಳಪ್ರಳಯದ ಶಾಪಕ್ಕೆ ಸಿಲುಕಿ ನಿರ್ನಾಮವಾಯಿತು. ಹ. ನೂಹ್(ಅ) ಅವರ ಸಂದೇಶ ಪ್ರಚಾರ ಪ್ರಯತ್ನಗಳನ್ನು ಪವಿತ್ರ ಕುರ್‌ಆನ್ ಅವರ ಭಾಷೆಯಲ್ಲೇ ಹೀಗೆ ವಿವರಿಸುತ್ತದೆ:

ನೂಹ್(ಅ) ಹೀಗೆ ಬಿನ್ನವಿಸಿದರು: "ಓ ನನ್ನ ಪ್ರಭೂ, ನಾನು ನನ್ನ ಜನಾಂಗದವರನ್ನು ಹಗಲಿರುಳೆನ್ನದೆ ಕರೆದೆನು. ಆದರೆ ನನ್ನ ಕರೆಯು ಅವರ ಪಲಾಯನವನ್ನು ಮಾತ್ರ ಹೆಚ್ಚಿಸಿತು. ನೀನು ಅವರನ್ನು ಕ್ಷಮಿಸುವಂತಾಗಲೆಂದು ನಾನು ಅವರನ್ನು ಕರೆದಾಗಲೆಲ್ಲಾ ಅವರು ಕಿವಿಗಳಲ್ಲಿ ಬೆರಳುಗಳನ್ನು ತುರುಕಿಸಿಕೊಂಡರು, ತಮ್ಮ ವಸ್ತ್ರಗಳಿಂದ ಮುಖ ಮುಚ್ಚಿಕೊಂಡರು- ಹಠಮಾರಿತನ ತೋರಿದರು ಮತ್ತು ಭಾರೀ ಅಹಂಭಾವ ತೋರಿಸಿದರು... ನನ್ನ ಪ್ರಭೂ, ಇವರು ನನ್ನ ಮಾತನ್ನು ತಿರಸ್ಕರಿಸಿದರು ಮತ್ತು ಸಂಪತ್ತು ಹಾಗೂ ಸಂತಾನಗಳನ್ನು ಪಡೆದು ಇನ್ನಷ್ಟು ನಷ್ಟಕ್ಕೊಳಗಾಗಿರುವವರನ್ನು ಅನುಸರಿಸಿದರು. ಇವರು ಬಹುದೊಡ್ಡ ಮೋಸದ ಜಾಲವನ್ನು ಹರಡಿಟ್ಟಿದ್ದಾರೆ." (ನೂಹ್: 5 ರಿಂದ 7 ಮತ್ತು 21, 22)

ಜನಾಂಗದ ಈ ಹಠಮಾರಿತನ ಮತ್ತು ಅವರ ಸಂದೇಶದ ಪರಿಣಾಮರಾಹಿತ್ಯದ ಹೊರತಾಗಿಯೂ ಹ.ನೂಹ್(ಅ) ಅವರು ಸತ್ಯಸಂದೇಶ ಪ್ರಚಾರದ ಕೆಲಸದಿಂದ ನಿರಾಶರಾಗಲಿಲ್ಲ. ಒಂಬೈನೂರ ಐವತ್ತು ವರ್ಷಗಳ ಕಾಲ ನಿರಂತರವಾಗಿ ಅವರು ಅದನ್ನು ಮಾಡುತ್ತಲಿದ್ದರು.

## ಸಂದೇಶ ಪ್ರಚಾರ ನಿಷ್ಪ್ರಯೋಜಕವಲ್ಲ

ದೇಶಬಾಂಧವರ ಮಧ್ಯೆ ಸಂದೇಶ ಪ್ರಚಾರ ಕಾರ್ಯದಿಂದ ನಾವು ನಿರೀಕ್ಷಿಸುವ ಫಲಿತಾಂಶವಾದರೂ ಏನು? ಇವತ್ತಿನ ಅವಿಶ್ವಾಸ, ಅಪನಂಬಿಕೆ ಮತ್ತು ಹಿಂದೂ, ಮುಸ್ಲಿಮ್ ಸಂಘರ್ಷ ತುಂಬಿದ ವಾತಾವರಣದಲ್ಲಿ ಮುಸ್ಲಿಮೇತರರು ಇಸ್ಲಾಮಿನ ಸಂದೇಶವನ್ನು ಬಹಳ ಸಹನೆ ಮತ್ತು ತಾಳ್ಮೆಯೊಂದಿಗೆ ಆಲಿಸುವ ಮತ್ತು ಆ ಬಗ್ಗೆ ಚಿಂತಿಸುವ ಸನ್ನದ್ಧತೆ

ಹೊಂದಿರುವುದು ಸಣ್ಣ ವಿಷಯವೇ? ಅಪ್ಪಟ ಇಸ್ಲಾಮಿ ಸಭೆ ಸಮಾರಂಭಗಳಲ್ಲಿ ಸತ್ಯಸಂದೇಶವನ್ನು ತಿಳಿಯಲಿಕ್ಕಾಗಿ ಬೃಹತ್‌ಸಂಖ್ಯೆಯ ಮುಸ್ಲಿಮೇತರರು ಪಾಲ್ಗೊಳ್ಳುವುದು ಸಣ್ಣ ವಿಚಾರವೇನು?

ಸತ್ಯವನ್ನು ಸ್ವೀಕರಿಸುವುದು ಅತ್ಯಂತ ಕಠಿಣ ಕೆಲಸ ಎಂಬ ವಾಸ್ತವಿಕತೆಯ ಹೊರತಾಗಿಯೂ ನಮ್ಮ ಈ ತನಕದ ಅನುಭವ ಹೇಗಿದೆ ಎಂಬುದನ್ನೊಮ್ಮೆ ಪರಿಶೀಲಿಸೋಣ: ಮುಸ್ಲಿಮೇತರರು ಇಸ್ಲಾಮಿನ ಸಂದೇಶವನ್ನು ಶ್ರವಣ ಸಾಮರ್ಥ್ಯವಿಲ್ಲದ ಕಿವಿಗಳಿಂದ ಕೇಳಿದ್ದಾರೆಂದಾಗಲೀ ಮುಸ್ಲಿಮೇತರರು ಸತ್ಯದ ಆಹ್ವಾನವನ್ನು ಅತ್ಯಂತ ತುಚ್ಛವಾಗಿ ನಿರಾಕರಿಸಿದ್ದಾರೆಂದಾಗಲಿ ಹೇಳಲು ಸಾಧ್ಯವೇ? ಪ್ರತಿರೋಧ ಮತ್ತು ಸಂಕಷ್ಟಗಳ ಹೊರತಾಗಿಯೂ ದೇವನ ದಾಸರು ಅದನ್ನು ಬರಮಾಡಿಕೊಂಡಿಲ್ಲವೇ? ಮಾತ್ರವಲ್ಲ ಅದನ್ನು ಸ್ವೀಕರಿಸಿ ಆ ಮಾರ್ಗದಲ್ಲಿ ಎಲ್ಲ ರೀತಿಯ ಸಂಕಷ್ಟ ಹಾಗೂ ತ್ಯಾಗಗಳಿಗೆ ಸಿದ್ಧರಾದವರಿಲ್ಲವೇ? ಖಂಡಿತವಾಗಿಯೂ ಇತಿಹಾಸ ಎರಡನೆಯ ವಾದವನ್ನೇ ನಿಜವೆಂದು ಸಾರಿ ಹೇಳುತ್ತಿದೆ. ಪ್ರವಾದಿ ಮುಹಮ್ಮದ್(ಸ) ಮತ್ತವರ ಪಾವನ ಸಂಗಾತಿಗಳ ಸಂದೇಶ ಪ್ರಚಾರಾತ್ಮಕ ಸಂಘರ್ಷ ಮತ್ತು ಸತ್ಯ ವಚನವನ್ನು ಎತ್ತಿ ಹಿಡಿಯುವ ಹೋರಾಟದಿಂದಾಗಿ ಕಟ್ಟಕಡೆಗೆ ಇಡೀ ಅರೇಬಿಯಾ ಮುಸ್ಲಿಮ್ ಆಗಿ ಮಾರ್ಪಡುತ್ತದೆ. ಆ ಬಳಿಕ ನಾಲ್ವರು ಸಚ್ಚರಿತ ಖಲೀಫರ ಕಾಲದಲ್ಲಿ ಇಸ್ಲಾಮಿನ ಸಂದೇಶ ಅರಬೇತರ ರಾಷ್ಟ್ರಗಳಿಗೂ ಹಬ್ಬುತ್ತದೆ. ಇಪ್ಪತ್ತೈದು-ಮೂವತ್ತು ವರ್ಷಗಳ ಅವಧಿಯಲ್ಲಿ ಸಿರಿಯಾ, ಇರಾಕ್, ಇರಾನ್, ಅಫಘಾನಿಸ್ತಾನ, ರೋಮ್ ಮತ್ತು ಈಜಿಪ್ಟ್‌ನಲ್ಲಿ ಇಸ್ಲಾಮ್ ವ್ಯಾಪಕ ಪ್ರಮಾಣದಲ್ಲಿ ಹಬ್ಬುತ್ತದೆ. ಮೊರಕ್ಕೊ, ಟ್ಯೂನಿಸ್, ಸುಡಾನ್, ಲಿಬಿಯಾ ಮತ್ತು ಅಲ್ಜೀರಿಯಾದಂತಹ ದೇಶಗಳಲ್ಲಿಯೂ ಇಸ್ಲಾಮ್ ಸಾರ್ವತ್ರಿಕ ಸ್ವೀಕಾರಕ್ಕೆ ಪಾತ್ರವಾಗುತ್ತದೆ. ಅನಂತರ ಭಾರತ, ಶ್ರೀಲಂಕಾ, ಇಂಡೊನೇಷಿಯಾ, ಮಲೇಶಿಯಾ, ಚೀನಾ, ರಷ್ಯಾ ಮತ್ತು ಸ್ಪೈನ್ ಮುಂತಾದ ಯುರೋಪ್ ಮತ್ತು ಏಶಿಯಾದ ಅನೇಕಾರು ರಾಷ್ಟ್ರಗಳಲ್ಲಿ ಇಸ್ಲಾಮ್ ಬಹಳ ಕ್ಷಿಪ್ರವಾಗಿ ಹಬ್ಬುತ್ತದೆ. ಇದೆಲ್ಲವೂ ಸಾಧ್ಯವಾಗುವುದು ಕೆಲವು ಸಹಾಬಿಗಳ, ತಾಬಈಗಳ, ತಬವುತ್ತಾಬಯೀಗಳ, ಅರಬ್ ವ್ಯಾಪಾರಿಗಳ, ಉಲಮಾಗಳ ಹಾಗೂ ಸೂಫಿವರ್ಯರುಗಳ ಸಂದೇಶ ಪ್ರಚಾರಾತ್ಮಕ ಪರಿಶ್ರಮಗಳಿಂದ. ಇಸ್ಲಾಮಿನ ಸಂದೇಶದಲ್ಲಿ ಅಸಾಮಾನ್ಯ ಆಕರ್ಷಣೆ ಮತ್ತು ಸ್ವೀಕಾರಾರ್ಹತೆಯ ಅದ್ವಿತೀಯ ಸಾಮರ್ಥ್ಯ ಇದೆಯೆಂಬುದಕ್ಕೆ ಇಂದು ಜಗತ್ತಿನಲ್ಲಿರುವ ನೂರು ಕೋಟಿ ಮುಸ್ಲಿಮರೇ ಅನಿಷೇಧ್ಯ ಸಾಕ್ಷ್ಯವಾಗಿದ್ದಾರೆ.

ಇದು ಹಳೆಯ ಕಾಲದ ಮಾತಾಯಿತೆಂದು ನೀವು ಹೇಳಬಹುದು. ಇಂದು ಮುಸ್ಲಿಮರ ನಿಷ್ಕ್ರಿಯತೆ ಮತ್ತು ದುಷ್ಕೃತ್ಯಗಳಿಂದಾಗಿ ಇಸ್ಲಾಮಿ ಸಂದೇಶ ತನ್ನ ಪ್ರಭಾವವನ್ನು ಕಳಕೊಂಡಿದೆಯೆಂದು ನೀವು ವಾದಿಸಬಹುದು. ಇದು ನೀವು ಯಾವುದೇ ಸಮೀಕ್ಷೆಯಿಂದ ಕಂಡುಕೊಂಡದ್ದಾಗಲೀ ಸಂದೇಶ ಪ್ರಚಾರ ಚಟುವಟಿಕೆಯಲ್ಲಿ ತೊಡಗಿರುವವರು ಹೇಳಿದ್ದಾಗಲಿ ಅಲ್ಲ. ವಾಸ್ತವವೆಂದರೆ ಈ ರೀತಿಯ ಅಭಿಪ್ರಾಯ ಯಾವ ರೀತಿಯಲ್ಲೂ ಸರಿಯಲ್ಲ. ನಮ್ಮ

ಅನುಭವವು ಇದಕ್ಕೆ ತೀರಾ ತದ್ವಿರುದ್ಧವಾಗಿದೆ. ಇಸ್ಲಾಮೀ ಸಂದೇಶ ಪ್ರಚಾರದ ಕಾರ್ಯ ಇನ್ನೂ ವ್ಯವಸ್ಥಿತವಾಗಿ ಮತ್ತು ವ್ಯಾಪಕವಾಗಿ ನಡೆಯದಿದ್ದರೂ ಆಫ್ರಿಕಾದಲ್ಲಿ ಇಸ್ಲಾಮ್ ಬಹಳ ವ್ಯಾಪಕವಾಗಿ ಹಬ್ಬುತ್ತಿದೆ ಮತ್ತು ಇಡೀ ಇಡೀ ರಾಷ್ಟ್ರಗಳೇ ಮುಸ್ಲಿಮ್ ಆಗಿ ಮಾರ್ಪಡುತ್ತಿವೆ. ಒಂದು ಕ್ರೈಸ್ತ ಮಿಶನರಿಯ ಅನಿಸಿಕೆಯಂತೆ ಇನ್ನು ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಇಸ್ಲಾಮ್ ಸಂಪೂರ್ಣ ಆಫ್ರಿಕಾವನ್ನು ಆಚ್ಛಾದಿಸಲಿದೆ. ಅಮೇರಿಕಾ ಮತ್ತು ಯುರೋಪ್‌ನ ವಿವಿಧ ರಾಷ್ಟ್ರಗಳಲ್ಲಿ ಇಸ್ಲಾಮೀ ಸಂದೇಶ ಪ್ರಚಾರದ ಕಾರ್ಯ ಇತ್ತೀಚೆಗಷ್ಟೆ ಆರಂಭಗೊಂಡಿದ್ದರೂ, ಬಹಳ ಸೀಮಿತ ಪ್ರಮಾಣದಲ್ಲಿದ್ದರೂ ಅದರ ಫಲಿತಾಂಶಗಳು ಅತ್ಯಂತ ಆಶಾಜನಕವಾಗಿವೆ. ಜಪಾನ್‌ನಂತಹ ರಾಷ್ಟ್ರಗಳಲ್ಲೂ ಇಸ್ಲಾಮಿನ ಹೆಜ್ಜೆ ಬಲಗೊಳ್ಳುತ್ತಿದೆ.

ನಿಮ್ಮ ಮಾತು ಇತರ ರಾಷ್ಟ್ರಗಳ ಮಟ್ಟಿಗೆ ನಿಜವಿರಬಹುದು. ಆದರೆ ಭಾರತದ ಚಿತ್ರಣ ತೀರಾ ಭಿನ್ನವಾದುದು. ಇಲ್ಲಿ ಸತ್ಯ ಸಂದೇಶದ ವಿಜಯದ ವಿದೂರ ಸಾಧ್ಯತೆಯೂ ಇಲ್ಲ. ಇಲ್ಲಿಯ ಭೂಮಿ ಬರಡಾಗಿದೆ. ವಿಚಿತ್ರ ರಾಜಕೀಯ ಸನ್ನಿವೇಶಗಳು ಈ ಬಂಜರುತನವನ್ನು ಇನ್ನಷ್ಟು ಹೆಚ್ಚಿಸಿ ಬಿಟ್ಟಿದೆ ಎಂದು ನೀವು ವಾದಿಸಬಹುದು. ಆದರೆ ನಿಮ್ಮ ಈ ವಾದದ ಹಿಂದೆ ಯಾವ ಸಾಕ್ಷ್ಯಾಧಾರಗಳಿವೆ? ಇದು ನಿಮ್ಮ ಮನಸ್ಸಿನಲ್ಲಿರುವ ಒಂದು ಪೂರ್ವಗ್ರಹ ಮಾತ್ರವೇ? ಎಂದು ನಾನು ಪ್ರಶ್ನಿಸಬಯಸುತ್ತೇನೆ. ಪರಿಸ್ಥಿತಿ ಮತ್ತು ಸಂಭವಗಳು ನಿಮ್ಮ ಈ ಭಾವನೆಯನ್ನು ಸಂಪೂರ್ಣವಾಗಿ ಅಲ್ಲಗಳೆಯುತ್ತವೆ. ಭಾರತದ ನೆಲ ಬಂಜರು ಅಲ್ಲ. ಅದು ಅತ್ಯಂತ ಮೆದು ಮತ್ತು ಫಲವತ್ತಾದುದು. ರೈತ ಒಂದು ವೇಳೆ ಜಮೀನನ್ನು ಬಿಟ್ಟು ಮನೆಯಲ್ಲಿ ಕುಳಿತುಕೊಂಡರೆ ಅಲ್ಲಿ ದೋಷವಿರುವುದು ಜಮೀನಿನದ್ದಲ್ಲ. ಬದಲಾಗಿ ರೈತನೇ ತಪ್ಪಿತಸ್ಥನಾಗಿದ್ದಾನೆ. ಹಿಂದೆ ಒಂದೇ ಉಪಖಂಡವಾಗಿದ್ದ ಭಾರತ, ಬಾಂಗ್ಲಾ ಮತ್ತು ಪಾಕಿಸ್ತಾನವನ್ನೊಳಗೊಂಡ ಈ ಭೂಭಾಗವು ಸುಮಾರು ಎಪ್ಪತ್ತೈದು ಕೋಟಿ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ಸುಮಾರು ಇಪ್ಪತ್ತೈದು ಕೋಟಿ ಮುಸ್ಲಿಮರಿದ್ದಾರೆ.* ಬಹುಶಃ ಪ್ರತಿ ಮೂವರಲ್ಲೊಬ್ಬ ಮುಸಲ್ಮಾನನಾಗಿದ್ದಾನೆ. ಇವರೆಲ್ಲಾ ಹೊರಗಿನಿಂದ ಬಂದವರೇ? ಖಂಡಿತವಾಗಿಯೂ ಅಲ್ಲ. ಈ ಪೈಕಿ ಬಹುತೇಕರು ಸ್ಥಳೀಯರಾಗಿದ್ದಾರೆ. ಅವರೆಲ್ಲರೂ ಸಂದೇಶ ಪ್ರಚಾರ ಕಾರ್ಯದಿಂದಾಗಿ ಮುಸ್ಲಿಮರಾಗಿದ್ದಾರೆ. ಹೊರಗಿನಿಂದ ಬಂದವರು ಕೂಡಾ ಆಕಾಶದಿಂದ ಇಳಿದು ಬಂದವರೇನೂ ಅಲ್ಲ. ಅವರು ಕೂಡಾ ಸಂದೇಶ ಪ್ರಚಾರಾತ್ಮಕ ಪರಿಶ್ರಮಗಳಿಂದಾಗಿ ಇಸ್ಲಾಮಿನ ಪರಿಧಿಯೊಳಕ್ಕೆ ಬಂದವರಾಗಿದ್ದರು. ಉಪಭೂಖಂಡದ ಈ ಮುಸ್ಲಿಮ್ ಜನಸಂಖ್ಯೆಯು ಇಸ್ಲಾಮಿಗೆ ಹಲವಾರು ಸಂದೇಶ ಪ್ರಚಾರಕರು, ಚಿಂತಕರು, ವಿದ್ವಾಂಸರು, ಬರಹಗಾರರು, ಹದೀಸ್ ಶಾಸ್ತ್ರಜ್ಞರು, ಕುರ್‌ಆನ್ ವ್ಯಾಖ್ಯಾನಗಾರರು, ಕರ್ಮಶಾಸ್ತ್ರಜ್ಞರು, ಮುಜದ್ದಿದ್‌ಗಳು ಮತ್ತು ಇಸ್ಲಾಮೀ ಆಂದೋಲನದ ಧ್ವಜವಾಹಕರನ್ನು ಕೊಟ್ಟಿದೆ. ಇವರನ್ನು ಇಸ್ಲಾಮೀ ಜಗತ್ತಿನ ಉನ್ನತ ವ್ಯಕ್ತಿಗಳ ಸಾಲಿನಲ್ಲಿ ಎಣಿಕೆ ಮಾಡಬಹುದು.

ಸಂಖ್ಯೆಯ ದೃಷ್ಟಿಯಿಂದಲೂ ಮೌಲಿಕ ದೃಷ್ಟಿಯಿಂದಲೂ ಈ ಮಣ್ಣು ಅತ್ಯಂತ ಫಲವತ್ತಾದುದೆಂದು ಸಾಬೀತಾಗಿದೆ. ಇದು ಇಸ್ಲಾಮಿ ಸಂದೇಶ ಪ್ರಚಾರ ಕಾರ್ಯ ಸುದೀರ್ಘ ಕಾಲದಿಂದ ಸ್ಥಬ್ದಗೊಂಡ, ಮುಸ್ಲಿಮ್ ಜನಸಾಮಾನ್ಯರ ಜೀವನ ಮುಸ್ಲಿಮೇತರರನ್ನು ಇಸ್ಲಾಮಿನಿಂದ ವಿಮುಖಗೊಳಿಸುವಷ್ಟು ಕೆಟ್ಟಿರುವ ಹೊರತಾಗಿಯೂ ಇರುವ ಚಿತ್ರಣ. ಒಂದು ವೇಳೆ ಮುಸ್ಲಿಮರ ಜೀವನ ಇಸ್ಲಾಮಿನ ಜೀವಂತ ಮಾದರಿಯಾಗುತ್ತಿದ್ದರೆ ಮತ್ತು ಇಸ್ಲಾಮಿ ಸಂದೇಶ ಪ್ರಚಾರದ ಕಾರ್ಯ ಜಾಣ್ಮೆ, ಯೋಜನೆ, ಸಂಘಟನೆ ಮತ್ತು ಕ್ರಿಯಾಶೀಲತೆಯೊಂದಿಗೆ ನಡೆಯುತ್ತಿದ್ದರೆ ಭಾರತ ಇಸ್ಲಾಮಿನ ಸರ್ವಶ್ರೇಷ್ಟ ಅಭಯಧಾಮವಾಗಿ ಮಾರ್ಪಡುತ್ತಿತ್ತು.

## ಇಂದಿನ ಭಾರತ ಭಿನ್ನವಾಗಿದೆ

ಇದೆಲ್ಲವೂ ಹಿಂದಿನ ಕಾಲದ ಮಾತಾಯಿತು. ದೇಶ ವಿಭಜನೆಯ ನಂತರದ ಪರಿಸ್ಥಿತಿಗಳು ವಿಭಜನೆಯ ಮುಂಚಿನ ಪರಿಸ್ಥಿತಿಗಳಿಗಿಂತ ಬಹಳಷ್ಟು ಭಿನ್ನವಾಗಿದೆ.ಇಂದು ಇಲ್ಲಿ ವೈಷಮ್ಯದ ಅಸಾಮಾನ್ಯ ಗೋಡೆಗಳು ಸತ್ಯದ ಮಾರ್ಗದ ಕಂಟಕಗಳಾಗಿ ನಿಂತಿವೆ. ಈಗ ಇಲ್ಲಿ ಮುಸ್ಲಿಮೇತರರಲ್ಲಿ ಇಸ್ಲಾಮಿ ಸಂದೇಶ ಪ್ರಚಾರ ಕಾರ್ಯ ಯಶಸ್ವಿಯಾಗುವ ಸಾಧ್ಯತೆ ಶೂನ್ಯಕ್ಕೆ ಸಮಾನ ಎಂದು ನೀವು ವಾದಿಸಬಹುದು.

ಇಂದಿನ ಭಾರತವು ಹಿಂದಿನ ಯುಗಗಳಿಗಿಂತ ಬಹಳಷ್ಟು ಭಿನ್ನವಾಗಿದೆ ಎಂಬುದರಲ್ಲಿ ನನಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಇಸ್ಲಾಮಿನ ಸಂದೇಶ ಹೊತ್ತುಕೊಂಡು ಅರಬ್ ವರ್ತಕರು, ಉಲಮಾಗಳು, ಸೂಫಿವರ್ಯರು ಇಲ್ಲಿಗೆ ಬಂದಾಗ ನಮ್ಮ ದೇಶದಲ್ಲಿ ಇಸ್ಲಾಮಿನ ಹೆಸರು ಅಥವಾ ಕುರುಹು ಕೂಡಾ ಇರಲಿಲ್ಲ. ಎಲ್ಲೆಡೆ ಬಹುದೇವಾರಾಧನೆ, ವಿಗ್ರಹಾರಾಧನೆ ಮತ್ತು ಸತ್ಯನಿಷೇಧ ರಾರಾಜಿಸುತ್ತಿತ್ತು. ಅದು ತೀವ್ರ ಅಜ್ಞಾನದ ಕಾಲವಾಗಿತ್ತು. ಧಾರ್ಮಿಕ ವೈಷಮ್ಯ ಅತ್ಯಂತ ಉಚ್ಛ್ರಾಯದಲ್ಲಿತ್ತು. ಉಚ್ಚ-ನೀಚತೆ ಮತ್ತು ಅಸ್ಪೃಶ್ಯತೆ ವ್ಯಾಪಕವಾಗಿತ್ತು. ಮುಸ್ಲಿಮರನ್ನು ಮ್ಲೇಚ್ಛರೆಂದು ಪರಿಗಣಿಸಲಾಗುತ್ತಿತ್ತು. ದೇಶವಾಸಿಗಳಿಗೆ ತಮ್ಮ ತತ್ವಶಾಸ್ತ್ರ, ವೇದಾಂತ, ಗಣಿತ ಶಾಸ್ತ್ರ, ವೈದ್ಯಕೀಯ ಶಾಸ್ತ್ರ ಮತ್ತು ಧರ್ಮದ ಬಗ್ಗೆ ಅಭಿಮಾನವಿತ್ತು. ಭಾಷೆ, ಉಡುಗೆ ಮತ್ತು ಸಂಸ್ಕೃತಿ-ವೈಶಿಷ್ಟ್ಯವು ಇದಕ್ಕಿಂತಲೂ ಹೆಚ್ಚಿನದಾಗಿತ್ತು. ಆ ಬಳಿಕ ಮುಸ್ಲಿಮ್ ಆಡಳಿತಗಾರರ ಇಸ್ಲಾಮೇತರ ಕಾರ್ಯವಿಧಾನವು ಈ ಪರಿಸ್ಥಿತಿಯನ್ನು ಇನ್ನಷ್ಟು ಬಿಗಡಾಯಿಸಿ ಬಿಟ್ಟಿತು. ಈ ವಿಷಮ ಸ್ಥಿತಿಗತಿಗಳ ಹೊರತಾಗಿಯೂ ಇಸ್ಲಾಮಿನ ಸಂದೇಶವು ಈ ರಾಷ್ಟ್ರದಲ್ಲಿ ನಳನಳಿಸುವುದು ಸಾಧ್ಯವಾಯಿತು ಮತ್ತು ಕೋಟಿಗಟ್ಟಲೆ ಜನರು ಇಸ್ಲಾಮಿನ ತೆಕ್ಕೆಯೊಳಗೆ ಬಂದರು. ಹಾಗಾಗಿಯೇ ಇಂದು ಉಪಖಂಡದ ಪ್ರತಿ ಮೂರನೇ ವ್ಯಕ್ತಿ ಮುಸ್ಲಿಮ್ ಆಗಿದ್ದಾನೆ ಮತ್ತು ಭಾರತದ ಪ್ರತಿ ಆರರಲ್ಲೊಬ್ಬ ಮುಸ್ಲಿಮ್ ಆಗಿದ್ದಾನೆ.

---

* ಇವು 1980ರ ಅಂಕಿ ಅಂಶಗಳು

ಇಂದು ಪರಿಸ್ಥಿತಿಯು ಹಿಂದಿಗಿಂತ ತೀರಾ ಭಿನ್ನವಾಗಿದೆ. ಅಜ್ಞಾನ, ಉಚ್ಚನೀಚತೆ ಮತ್ತು ಧಾರ್ಮಿಕ ಭೇದಭಾವಗಳು ಹಿಂದಿನದಕ್ಕೆ ಹೋಲಿಸಿದರೆ ಸಾಕಷ್ಟು ಕಡಿಮೆಯಾಗಿವೆ. ಇಂದಿನ ಸುಶಿಕ್ಷಿತ ಮುಸ್ಲಿಮೇತರರು ತಮ್ಮ ಸಂಪ್ರದಾಯಗಳು ಮತ್ತು ಪುರಾಣಗಳ ಬಗ್ಗೆ ಅಸಮಾಧಾನಕ್ಕೆ ತುತ್ತಾಗಿದ್ದಾರೆ. ಪ್ರಸಕ್ತ ಬೌದ್ಧಿಕ ಮತ್ತು ವೈಚಾರಿಕ ಪ್ರಗತಿ ಹಾಗೂ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ಅವರನ್ನು ಹೊಸ ಮಾರ್ಗವನ್ನು ಕಂಡು ಹುಡುಕುವಂತೆ ಮಾಡಿದೆ. ತಮ್ಮ ಸಂಪ್ರದಾಯಗಳು ಮತ್ತು ಸ್ಮೃತಿಗಳಲ್ಲಿ ಹೇಳಲಾಗಿರುವ ಕಾನೂನುಗಳಿಂದ ಇಂದು ಮಾನವಕುಲ ಎದುರಿಸುತ್ತಿರುವ ಅಥವಾ ಕನಿಷ್ಠಪಕ್ಷ ಭಾರತ ಎದುರಿಸುತ್ತಿರುವ ಸಂದಿಗ್ಧ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಾದೀತು ಎಂದಾಗಲೀ ಅಥವಾ ಅವುಗಳಿಂದ ದೇಶವಾಸಿಗಳಿಗೆ ಔಚಿತ್ಯಪೂರ್ಣವೂ ನ್ಯಾಯಯುತವೂ ವ್ಯಾವಹಾರಿಕವೂ ಪ್ರಗತಿಶೀಲವೂ ಆದ ವ್ಯವಸ್ಥೆ ಸ್ಥಾಪಿಸಲು ಸಾಧ್ಯವಾದೀತೆಂದಾಗಲೀ ಅವರು ಭಾವಿಸುವುದಿಲ್ಲ. ಇಂದಿನ ವ್ಯಾವಹಾರಿಕ ಮತ್ತು ವೈಚಾರಿಕ ಯುಗದಲ್ಲಿ ಬಹುದೇವಾರಾಧನೆಗೆ ಯಾವುದೇ ಅವಕಾಶ ಉಳಿದಿಲ್ಲ. ಯಾವನೇ ಗಂಭೀರ ವ್ಯಕ್ತಿಗೆ ಬಹುದೇವಾರಾಧಕ ಆಚರಣೆಗಳನ್ನು ಪಥ್ಯ ಮಾಡುವುದು ಸಾಧ್ಯವಾಗುವುದಿಲ್ಲ. ಈ ಪರಿಸ್ಥಿತಿಗಳಲ್ಲಿ ನಾವು ದೇಶಬಾಂಧವರ ರಾಜಕೀಯ ಪ್ರತಿಸ್ಪರ್ಧಿಗಳಾಗುವ ಬದಲು ಅವರ ಹಿತಾಕಾಂಕ್ಷಿಗಳೂ ಅವರ ಮಾರ್ಗದರ್ಶಕರೂ ಆಗಿ ಮುಂದೆ ಬಂದರೆ ಇಂದು ಸತ್ಯ ಸಂದೇಶ ಸ್ವೀಕಾರದ ಸಂಭಾವ್ಯತೆ ಹಿಂದಿಗಿಂತ ಹಲವು ಪಟ್ಟು ಹೆಚ್ಚುವ ಸಾಧ್ಯತೆಯಿದೆ.

ಇದೊಂದು ತಾತ್ವಿಕ ಮತ್ತು ಕಾಲ್ಪನಿಕ ಮಾತೆಂದೂ ವಾಸ್ತವ ಸತ್ಯಗಳೊಂದಿಗೆ ಅವುಗಳಿಗೆ ಯಾವುದೇ ಸಂಬಂಧವಿಲ್ಲವೆಂದೂ ನೀವು ಹೇಳಬಹುದು. ಆದರೆ ನೀವು ಕಾಲ್ಪನಿಕ ಪ್ರಪಂಚದಲ್ಲಿರುವಿರೆಂದು ನಾನು ವಾಸ್ತವ ಘಟನೆಗಳ ಬೆಳಕಿನಲ್ಲಿ ಹೇಳಬಲ್ಲೆ. ಇಂದು ಕೂಡಾ ಪ್ರತಿ ವರ್ಷ ಸಹಸ್ರಾರು ಮಂದಿ ಇಸ್ಲಾಮಿನತ್ತ ಬರುತ್ತಿದ್ದಾರೆ. ಇಸ್ಲಾಮ್ ಸ್ವೀಕರಿಸುವ ಈ ಪ್ರಕ್ರಿಯೆಯು ಯಾವುದೇ ಸಂದೇಶ ಪ್ರಚಾರಾತ್ಮಕ ಪರಿಶ್ರಮವಿಲ್ಲದೆಯೇ ಉತ್ತರದಿಂದ ದಕ್ಷಿಣದವರೆಗೆ ತನ್ನಿಂತಾನಾಗಿಯೇ ಜರಗುತ್ತಿದೆ. ಇಸ್ಲಾಮಿನ ಸಂದೇಶವನ್ನು ತಲಪಿಸುವ ಸಣ್ಣಪುಟ್ಟ ಹಾಗೂ ಸೀಮಿತ ಪ್ರಯತ್ನಗಳು ಇತ್ತೀಚಿಗೆ ದೇಶದಲ್ಲಿ ನಡೆಯುತ್ತಿವೆ. ಸತ್ಯ ಸ್ವೀಕಾರದ ದೃಷ್ಟಿಯಿಂದಲೂ ಆ ಪರಿಶ್ರಮಗಳ ಫಲಶ್ರುತಿ ಅತ್ಯಂತ ಆಶಾದಾಯಕವಾಗಿದೆ.

ಮೂವತ್ತು ವರ್ಷಗಳ ಸುದೀರ್ಘ ಮತ್ತು ನಿರಂತರ ಪರಿಶ್ರಮದ ಹೊರತಾಗಿಯೂ ಬಹಳ ಕಡಿಮೆ ಮಂದಿ ಮಾತ್ರ ಜಮಾಅತೆ ಇಸ್ಲಾಮೀ ಹಿಂದ್‌ನ ಸದಸ್ಯರಾಗಿ ಮಾರ್ಪಟ್ಟಿದ್ದಾರೆ. ಇದು ಕೂಡಾ ನಮ್ಮ ಮಟ್ಟಿಗೆ ಚಿಂತನೆಗೆ ಅರ್ಹವಾದ ಸಂಗತಿಯಲ್ಲವೇ? ಒಂದು ವೇಳೆ ಸಂಖ್ಯೆಯ ಈ ಕೊರತೆಯು ನಮ್ಮನ್ನು ನಿರಾಶೆಗೊಳಿಸಿಲ್ಲವೆಂದಾದರೆ ಸತ್ಯ ಸ್ವೀಕರಿಸುವವರ ಪ್ರಮಾಣದ ಕೊರತೆಯು ನಮ್ಮ ಆತ್ಮ ವಿಶ್ವಾಸವನ್ನು ಯಾಕೆ ಕುಂಠಿತಗೊಳಿಸಬೇಕು? ನಿಜವಾಗಿ ಮುಸ್ಲಿಮರಿಗೆ ಹೋಲಿಸಿದರೆ ಮುಸ್ಲಿಮೇತರರಲ್ಲಿ ನಮ್ಮ ಕೆಲಸದ ಪ್ರಮಾಣ ಶೂನ್ಯಕ್ಕೆ

ಹತ್ತಿರವಿದೆ ಮತ್ತು ಯಾವನೇ ಮುಸ್ಲಿಮೇತರ ವ್ಯಕ್ತಿ ಇಸ್ಲಾಮ್ ಸ್ವೀಕರಿಸುವುದು ಒಬ್ಬ ಮುಸ್ಲಿಮ್ ವ್ಯಕ್ತಿ ಜಮಾಅತೆ ಇಸ್ಲಾಮಿಯ ಸದಸ್ಯನಾಗುವುದಕ್ಕಿಂತ ಹೆಚ್ಚು ಕಠಿಣವೂ ಸಹನೆ ಪರೀಕ್ಷಿಸುವಂತಹದ್ದೂ ಆಗಿದೆ. ಸಹನೆ ಮತ್ತು ಜಾಣ್ಮೆಯೊಂದಿಗೆ ಇಸ್ಲಾಮಿನ ಸಂದೇಶವನ್ನು ನಿರಂತರವಾಗಿ ಪ್ರಚಾರಪಡಿಸುತ್ತಾ ಹೋದರೆ ಖಂಡಿತವಾಗಿಯೂ ಹತ್ತು ಮಂದಿಯಲ್ಲಿ ಇಬ್ಬರಿಗಾದರೂ ಸತ್ಯಸಂದೇಶ ಸ್ವೀಕರಿಸುವ ಸೌಭಾಗ್ಯವನ್ನು ಅಲ್ಲಾಹನು ಕರುಣಿಸುತ್ತಾನೆ ಎಂಬ ವಿಶ್ವಾಸ ನನಗಿದೆ. ಈ ಮಾರ್ಗ ತುಳಿಯುವ ಧೈರ್ಯ ಪ್ರದರ್ಶಿಸಲು ಸಾಧ್ಯವಾಗದವರು ಕೂಡಾ ಮುಸ್ಲಿಮರಿಗೆ ನಿಕಟರಾಗುವ ಸಾಧ್ಯತೆಯಿದೆ. ಇಸ್ಲಾಮಿನ ಬಗ್ಗೆ ಅವರಲ್ಲಿ ಸದಭಿಪ್ರಾಯ ಮೂಡಬಹುದು. ಅವರು ಒಳಿತಿನ ಕಾರ್ಯಗಳಲ್ಲಿ ಇಸ್ಲಾಮೀ ಆಂದೋಲನದೊಂದಿಗೆ ಸಹಕರಿಸಲು ಸಿದ್ಧರಾಗುವರು. ಇದು ಆಂದೋಲನದ ಮಟ್ಟಿಗೆ ಲಾಭದ ದೃಷ್ಟಿಯಿಂದ ಕಡಿಮೆಯೇನಲ್ಲ.

## ಪ್ರತಿಭೆ ಇಲ್ಲದಿರುವುದು

ದೇಶಬಾಂಧವರಿಗೆ ಸತ್ಯಸಂದೇಶವನ್ನು ತಲಪಿಸದಿರುವುದಕ್ಕೆ ಆ ಕೆಲಸಕ್ಕೆ ಬೇಕಾದ ಸಾಮರ್ಥ್ಯ ನಮ್ಮಲ್ಲಿಲ್ಲ ಎಂದು ಕಾರ್ಯಕರ್ತರು ಭಾವಿಸಿರುವುದು ಕೂಡಾ ಒಂದು ಕಾರಣವಾಗಿದೆ. ಆದರೆ ಈ ಭಾವನೆ ಯಾವನೇ ಸಂದೇಶ ಅಥವಾ ಆಂದೋಲನದ ಕಾರ್ಯಕರ್ತನಿಗೆ ಶೋಭಿಸುವುದಿಲ್ಲ. ಯಾವುದೇ ಸಿದ್ಧಾಂತ, ಆಂದೋಲನ ಅಥವಾ ಧರ್ಮದ ಮೇಲೆ ನಂಬಿಕೆ ಮತ್ತು ವಿಶ್ವಾಸವುಳ್ಳ ವ್ಯಕ್ತಿ ಪ್ರತಿಭೆಗಳ ಬಗ್ಗೆ ಚಿಂತಿಸುವಷ್ಟು ಬಿಡುವು ಹೊಂದಿರುವುದಿಲ್ಲ. ಆತನ ವಿಶ್ವಾಸ, ಆತನ ಆವೇಶ ಹಾಗೂ ಆತನ ಹುಚ್ಚು ಆತನನ್ನು ತನ್ನ ಮಾತನ್ನು ಎಲ್ಲರಿಗೂ ತಲಪಿಸುವಂತೆ ಬಲವಂತ ಪಡಿಸುತ್ತದೆ. ಆತ ತನ್ನ ಎದುರಿಗಿರುವ ವ್ಯಕ್ತಿ ವೈಚಾರಿಕ ಮತ್ತು ಬೌದ್ಧಿಕ ದೃಷ್ಟಿಯಿಂದ ತನಗಿಂತ ಎಷ್ಟು ಎತ್ತರದಲ್ಲಿದ್ದಾನೆ ಎಂಬುದನ್ನು ನೋಡುವುದಿಲ್ಲ. ಇಸ್ಲಾಮೀ ಆಂದೋಲನದ ಆರಂಭ ಕಾಲದಲ್ಲಿ ನಮ್ಮ ಕಾರ್ಯಕರ್ತರು, ಅದರಲ್ಲೂ ವಿದ್ಯೆ ಮತ್ತು ಪ್ರತಿಭೆಯ ದೃಷ್ಟಿಯಿಂದ ಹಿಂದುಳಿದವರು ತಮ್ಮ ಅದಮ್ಯ ತುಡಿತದಿಂದಾಗಿ ದೊಡ್ಡ ದೊಡ್ಡ ವ್ಯಕ್ತಿಗಳಿಗೂ ಸತ್ಯ ಸಂದೇಶವನ್ನು ತಲುಪಿಸಿದ್ದರು. ಮಾತ್ರವಲ್ಲ ಶ್ರೇಷ್ಠತಮ ವ್ಯಕ್ತಿಗಳು ಇಸ್ಲಾಮೀ ಆಂದೋಲನದ ಯಾತ್ರಾ ತಂಡದಲ್ಲಿ ಸೇರುವಂತೆ ಮಾಡುವುದರಲ್ಲಿ ಯಶಸ್ವಿಯಾಗಿದ್ದರು. ವಾಸ್ತವದಲ್ಲಿ ಈ ಕೆಲಸಕ್ಕೆ ಬೇಕಾಗಿರುವ ಅತ್ಯಂತ ದೊಡ್ಡ ಅರ್ಹತೆಯೆಂದರೆ ದೃಢವಾದ ವಿಶ್ವಾಸ, ಅವಿರತ ಹುಮ್ಮಸ್ಸು ಹಾಗೂ ಸತ್ಯ ಮತ್ತು ಸತ್ಯ ಸಂದೇಶ ತಲಪಿಸುವ ಉತ್ಕಟ ಅಭಿಲಾಷೆ ಮಾತ್ರ. ಜನರು ಸಾಕ್ಷ್ಯಾಧಾರಗಳಿಗಿಂತಲೂ ಹೆಚ್ಚಾಗಿ ದೃಢವಿಶ್ವಾಸ, ಅದಮ್ಯ ತುಡಿತ ಮತ್ತು ಉತ್ಕಟ ಅಭಿಲಾಷೆಯನ್ನು ಕಂಡು ಪ್ರಭಾವಿತರಾಗುತ್ತಾರೆ. ಅನಂತರ ಈ ಕೆಲಸಕ್ಕೆ ಅತ್ಯಗತ್ಯವಾಗಿರುವ ಇನ್ನೊಂದು ಮುಖ್ಯ ವಸ್ತುವೆಂದರೆ 'ಸಾಲಿಹಿಯತ್' ಅಥವಾ ಸಜ್ಜನಿಕೆ, ಸದ್ವರ್ತನೆ ಮತ್ತು

ಸಚ್ಚಾರಿತ್ರ್ಯ ಎಂತಹ ಪ್ರಬಲ ಅಸ್ತ್ರಗಳೆಂದರೆ ಅವು ಎಂದೂ ನಿರುಪಯುಕ್ತವಾಗಿ ಬಿಡುವುದಿಲ್ಲ. ಆರಂಭ ಕಾಲದಲ್ಲಿ ಸತ್ಯ ಸಂದೇಶದ ಪ್ರಸಾರದಲ್ಲಿ ಕುರ್‌ಆನ್‌ನ ಸಾಕ್ಷ್ಯಾಧಾರಗಳಿಗೆ ಮತ್ತು ಅದರ ನಿರೂಪಣಾ ಶೈಲಿಗೆ ಎಷ್ಟು ಮುಖ್ಯ ಪಾತ್ರವಿತ್ತೋ ಅಷ್ಟೇ ಮಹತ್ವದ ಪಾತ್ರ ಅಲ್ಲಾಹನ ಸಂದೇಶವಾಹಕರ ಮತ್ತು ಅವರ ಸಂಗಾತಿಗಳ ಸಚ್ಚಾರಿತ್ರ್ಯ ಮತ್ತು ಸನ್ನಡತೆಗಳಿಗೆ ಇತ್ತು. ಅನಂತರದ ಯುಗಗಳ ಮಟ್ಟಿಗೂ ಈ ಮಾತು ಸತ್ಯವಾಗಿದೆ. ಸತ್ಯ ಪ್ರಚಾರಕರ ವಿಶ್ವಾಸ, ಅವರ ಅದಮ್ಯ ತುಡಿತ ಮತ್ತು ಸತ್ಯದ ಬಗೆಗಿನ ಅವರ ಉತ್ಕಟ ಪ್ರೀತಿ ಹಾಗೂ ಅವರ ಸಚ್ಚಾರಿತ್ರ್ಯಗಳು ಕೇಳುಗನ ಮೇಲೆ ಎಲ್ಲಕ್ಕಿಂತಲೂ ಹೆಚ್ಚಿನ ಪ್ರಭಾವ ಬೀರುತ್ತಿತ್ತು. ಇಂದು ಕೂಡಾ ಇಸ್ಲಾಮಿನತ್ತ ಆಕರ್ಷಿತರಾಗುವವರ ಪೈಕಿ ಹೆಚ್ಚಿನವರು ಸಾಕ್ಷ್ಯಾಧಾರಗಳಿಗಿಂತಲೂ ಮುಸ್ಲಿಮರ ಸಚ್ಚಾರಿತ್ರ್ಯದಿಂದ ಪ್ರಭಾವಿತರಾಗಿ ಬರುತ್ತಿದ್ದಾರೆ.

ನಿಜವಾಗಿ ನಮ್ಮ ಕಾರ್ಯಕರ್ತರು ಈ ವಿಷಯದಲ್ಲಿ ಅನಗತ್ಯವಾಗಿ ಕೀಳರಿಮೆಗೆ ಬಲಿಯಾಗಿದ್ದಾರೆ. ಒಂದು ವೇಳೆ ಅವರು ದೇಶಬಾಂಧವರ ಜತೆ ಸಂಪರ್ಕ ಬೆಳೆಸಿದರೆ ಮತ್ತು ಅವರೊಂದಿಗೆ ಮಾತುಕತೆ ನಡೆಸುವ ಅವಕಾಶಗಳನ್ನು ಪಡಕೊಂಡರೆ ಅವರಿಗೆ ಮುಸ್ಲಿಮೇತರ ಜನಸಾಮಾನ್ಯರು ಮಾತ್ರವಲ್ಲ ಮುಸ್ಲಿಮೇತರ ಗಣ್ಯರು ಕೂಡಾ ಒಂದು ರೀತಿಯ ಕೀಳರಿಮೆಗೆ ಗುರಿಯಾಗಿರುವುದು ಮನದಟ್ಟಾಗುತ್ತದೆ. ನಿಜವಾಗಿ ಅವರು ಇಂದು ಬಹುದೊಡ್ಡ ಶೂನ್ಯತೆಯನ್ನು ಎದುರಿಸುತ್ತಿದ್ದಾರೆ. ಅವರ ಬಳಿ ವಿಶ್ವಾಸದ ಅಸ್ತ್ರವಿಲ್ಲ. ಅವರ ಬಳಿ ಜನಾಂಗೀಯ ಮತ್ತು ಸಾಂಸ್ಕೃತಿಕ ಉಚ್ಚ ನೀಚತೆಯ ವಿನಾ ಬೇರೇನೂ ಇಲ್ಲ. ನೀವಂತೂ ಸತ್ಯವಿಶ್ವಾಸ ಮತ್ತು ನಂಬಿಕೆಯುಳ್ಳವರಾಗಿದ್ದೀರಿ. ನಿಮ್ಮ ಬಳಿ ಇಸ್ಲಾಮಿನಂತಹ ಸತ್ಯ ಧರ್ಮವಿದೆ. ಅದು ಬುದ್ಧಿಗೆ ನಿಲುಕುವಂತದ್ದು ಮತ್ತು ಸಾಕ್ಷ್ಯವುಳ್ಳದ್ದಾಗಿರುವುದರ ಜೊತೆಗೆ ಮನಸ್ಸು ಮತ್ತು ಆತ್ಮಕ್ಕೆ ಶಾಂತಿ ಮತ್ತು ಸಂತೃಪ್ತಿ ನೀಡುವಂತಹದ್ದೂ ಆಗಿದೆ. ಮಾತ್ರವಲ್ಲ ಅದರಲ್ಲಿ ಮಾನವ ಕುಲದ ಎಲ್ಲ ಕ್ಲಿಷ್ಟಕರ ಸಮಸ್ಯೆಗಳಿಗೂ ವಾಸ್ತವಿಕ ಪರಿಹಾರವಿದೆ. ಈ ಸತ್ಯದಲ್ಲಿ ಸ್ವತಃ ಅತ್ಯಂತ ಪ್ರಬಲವಾದ ಆಕರ್ಷಣೆಯಿದೆ. ನೀವಂತೂ ಕೇವಲ ಒಂದು ಮಾಧ್ಯಮ ಮತ್ತು ನೆಪ ಮಾತ್ರವಾಗಿದ್ದೀರಿ ಮತ್ತು ನಿಮ್ಮ ಬಳಿ ಕಾಲದ ಅತ್ಯುತ್ತಮ ಸಾಹಿತ್ಯವಿದೆ. ಅದರ ಜೊತೆಗೆ ನೀವು ನಿಸ್ವಾರ್ಥತೆ, ಸದ್‌ವರ್ತನೆ ಮತ್ತುಮನುಷ್ಯರೊಂದಿಗೆ ಕರುಣೆ, ವಾತ್ಸಲ್ಯ ಹಾಗೂ ಹಿತಾಕಾಂಕ್ಷೆಯ ಉನ್ನತ ಗುಣಗಳನ್ನು ಬೆಳೆಸಿಕೊಂಡರೆ ಎಷ್ಟೇ ದೊಡ್ಡ ವೈರಿಯ ಮೇಲಾದರೂ ಪ್ರಭಾವ ಬೀರಲು ಸಮರ್ಥರಾಗುತ್ತೀರಿ. ನೀವು ಕಡಿಮೆ ಸಾಮರ್ಥ್ಯದವರಾಗಿರುವುದು ನಿಮ್ಮ ಧ್ಯೇಯ ಸಾಧನೆಯ ಹಾದಿಯಲ್ಲಿ ಖಂಡಿತವಾಗಿಯೂ ಕಂಟಕವಾಗಲಾರದು.

ಇದು ಬರೇ ತಾತ್ವಿಕ ಮಾತಲ್ಲ. ಕಳೆದ ಕೆಲ ವರ್ಷಗಳಲ್ಲಿ ಭಾರತದಲ್ಲಿ, ಅದರಲ್ಲೂ ಉತ್ತರ ಪ್ರದೇಶದಲ್ಲಿ ನಡೆದ ಸಂದೇಶ ಪ್ರಚಾರದ ಸಣ್ಣ ಪುಟ್ಟ ಪ್ರಯತ್ನಗಳ ಪರಿಣಾಮವಾಗಿ ಅನೇಕ ಆತ್ಮಗಳಿಗೆ ಸತ್ಯ ಸ್ವೀಕಾರದ ಸೌಭಾಗ್ಯ ಪ್ರಾಪ್ತವಾಗಿದೆ. ಈ ಕೆಲಸವನ್ನು ನಡೆಸಿದವರು ಹೆಚ್ಚಾಗಿ ಕಡಿಮೆ ಪ್ರತಿಭೆಯ ನಮ್ಮ ಕಾರ್ಯಕರ್ತರಾಗಿದ್ದರು. ಈ ಮಾರ್ಗಕ್ಕೆ ಪ್ರತಿಭೆಗಿಂತಲೂ

ದೃಢವಿಶ್ವಾಸ, ಸನ್ನದ್ಧತೆ ಮತ್ತು ಸನ್ನಡತೆಯ ಅಗತ್ಯವಿದೆಯೆಂಬುದನ್ನು ಇದು ತೋರಿಸುತ್ತದೆ.

ಅಪೇಕ್ಷಿತ ಅರ್ಹತೆಗಳು ಯಾವುದೇ ಒಂದು ಕೆಲಸದ ಯಶಸ್ಸನ್ನು ಖಾತ್ರಿಗೊಳಿಸುವ ಜಾಮೀನಾಗಿದೆ. ಆದರೆ ಈ ಪ್ರತಿಭೆ ಸೃಷ್ಟಿಸುವುದರಿಂದ ಸೃಷ್ಟಿಯಾಗುವುದಿಲ್ಲ. ಅದು ಎಲ್ಲಿಂದಲೋ ತನ್ನಿಂತಾನೇ ನಿಮ್ಮ ಮೇಲೆ ಬೀಳಲಾರದು. ನಿಮ್ಮಲ್ಲಿ ಮುಸ್ಲಿಮೇತರರಲ್ಲಿ ಸತ್ಯ ಸಂದೇಶ ಪ್ರಚಾರ ಕಾರ್ಯದ ಮಹತ್ವದ ಪ್ರಜ್ಞೆಯಿದ್ದರೆ ಮತ್ತು ಅದರ ಪ್ರತಿಫಲದ ನಿರೀಕ್ಷೆಯಿದ್ದರೆ ರಾತ್ರಿ ಹಗಲೆನ್ನದೆ ಪ್ರತಿಭೆಯನ್ನು ಸ್ವಯಂ ಸೃಷ್ಟಿಸಲು ನೀವಾಗಿಯೇ ಕಾರ್ಯೋನ್ಮುಖರಾಗುತ್ತೀರಿ. ಈ ಪ್ರತಿಭೆಯೆಂಬುದು ನಿಜವಾಗಿಯೂ ಏನು? ನಿಮಗೆ ಇಸ್ಲಾಮಿನ ಸರಿಯಾದ ಜ್ಞಾನ ಇರಬೇಕು ಮತ್ತು ನೀವು ಇಸ್ಲಾಮಿನ ಸಂದೇಶವನ್ನು ಸಮರ್ಪಕವಾಗಿ ಮತ್ತು ಸಾಕ್ಷ್ಯಾಧಾರಗಳೊಂದಿಗೆ ತಲಪಿಸಲು ಸಮರ್ಥರಾಗಬೇಕು. ಇದೇನೂ ಕಷ್ಟದ ಕೆಲಸವಲ್ಲ. ನಿಮ್ಮ ಬಳಿ ಪವಿತ್ರ ಕುರ್‌ಆನ್, ಅದರ ವ್ಯಾಖ್ಯಾನ ಗ್ರಂಥಗಳು, ಹದೀಸ್ ಗ್ರಂಥಗಳ ಅನುವಾದಗಳಿವೆ. ಪ್ರವಾದಿ ಜೀವನ ಚರಿತ್ರೆ ಮತ್ತು ಇಸ್ಲಾಮಿ ಬೋಧನೆಗಳಿಗೆ ಸಂಬಂಧಿಸಿದಂತೆ ಅತ್ಯುತ್ತಮ ಗ್ರಂಥಗಳು ಲಭ್ಯವಿವೆ. ಈಗ ಆಗಬೇಕಾಗಿರುವುದು ಅವುಗಳ ಆಳವಾದ ಅಧ್ಯಯನ. ನಿಮ್ಮ ಸತ್ಯವಿಶ್ವಾಸ, ನಿಮ್ಮ ಕ್ರಿಯೆಗಳು, ನಿಮ್ಮ ತರಬೇತಿ, ಸಮುದಾಯದ ಸುಧಾರಣೆ ಮತ್ತು ಮುಸ್ಲಿಮೇತರರಲ್ಲಿ ಸಂದೇಶ ಪ್ರಚಾರ ಕಾರ್ಯ ಹೀಗೆ ಪ್ರತಿಯೊಂದಕ್ಕೂ ಈ ಅಧ್ಯಯನ ಅತ್ಯಂತ ಅಗತ್ಯ ಮಾತ್ರವಲ್ಲ ಬಹಳ ಪ್ರಯೋಜನಕಾರಿಯೂ ಆಗಿದೆ.

ಮುಸ್ಲಿಮೇತರರಲ್ಲಿ ಕೆಲಸ ಮಾಡಲು ಅಗತ್ಯವಿರುವ ಇನ್ನೊಂದು ಅರ್ಹತೆಯೆಂದರೆ ನಿಮಗೆ ಅವರ ಮನಸ್ಥಿತಿ, ವಿಚಾರಧಾರೆಗಳು, ಸಂಪ್ರದಾಯಗಳು, ಧರ್ಮ ಮತ್ತು ಸದ್ಯದ ಪ್ರವೃತ್ತಿಗಳ ಸಮಗ್ರ ತಿಳಿವು ಇರಬೇಕು. ಇದಕ್ಕಿರುವ ಒಂದು ಮಾರ್ಗವೆಂದರೆ ಪುಸ್ತಕಗಳ ಅಧ್ಯಯನ. ಈ ಅರ್ಹತೆಯನ್ನು ಬೆಳೆಸಿಕೊಳ್ಳಲು ಸಹಾಯಕವಾಗಬಲ್ಲ ಹಲವಾರು ಕೃತಿಗಳು ಉರ್ದು, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ* ಲಭ್ಯವಿವೆ. ಈ ಪುಸ್ತಕಗಳ ಅಧ್ಯಯನ ಖಂಡಿತವಾಗಿಯೂ ನಿಮಗೆ ಪ್ರಯೋಜನಕಾರಿ ಮತ್ತು ಸಹಕಾರಿ ಎನಿಸುವುದರಲ್ಲಿ ಯಾವುದೇ ಸಂದೇಹವಿಲ್ಲ.

ಗ್ರಾಂಥಿಕ ಜ್ಞಾನಕ್ಕಿಂತಲೂ ಮುಸ್ಲಿಮೇತರ ಜನಸಾಮಾನ್ಯರು ಮತ್ತು ಗಣ್ಯರ ಜತೆ ಸಂಪರ್ಕ ಬೆಳೆಸಿ ಅವರ ಮಾನಸಿಕತೆ, ಮನೋಭಾವ, ವಿಚಾರಧಾರೆ ಮತ್ತು ಪ್ರವೃತ್ತಿಗಳನ್ನು ಸ್ವತಃ ತಿಳಿದು ಕೊಳ್ಳುವುದು ಹೆಚ್ಚು ಉಪಯುಕ್ತವಾಗಬಹುದು. ಯಾಕೆಂದರೆ ಇಂದಿನ ಹಿಂದೂ ಸಮಾಜವು ತನ್ನ ಧಾರ್ಮಿಕ ಸ್ರೋತಗಳು ಮತ್ತು ಧಾರ್ಮಿಕ ಗ್ರಂಥಗಳಿಂದ ಬಹಳಷ್ಟು ದೂರಸರಿದಿದೆ. ಆದ್ದರಿಂದ ಆ ಸಮಾಜವನ್ನು ಅರ್ಥಮಾಡಲು ಸ್ವತಃ ಅದರೊಂದಿಗೆ ನಿಕಟ

---

* ಕನ್ನಡದಲ್ಲೂ ಹಲವಾರು ಪುಸ್ತಕಗಳು ಲಭ್ಯವಿದೆ.

ಸಂಪರ್ಕ ಇಟ್ಟುಕೊಳ್ಳುವ ಅಗತ್ಯ ವಿದೆ. ಈ ಕೆಲಸ ನಿಮ್ಮ ಸಂದೇಶ ಪ್ರಚಾರಾತ್ಮಕ ಕೆಲಸದ ಮಧ್ಯೆ ಬಹಳ ಸುಂದರವಾಗಿ ನಡೆಯಬಹುದು.

## ಸೂಕ್ತ ಸಾಹಿತ್ಯದ ಕೊರತೆ

ಮುಸ್ಲಿಮೇತರರಿಗೆ ನೀಡಲು ಸರಿಯಾದ ಸಾಹಿತ್ಯ ಕೃತಿಗಳಿಲ್ಲ ಎಂಬುದು ನಮ್ಮ ಕಾರ್ಯಕರ್ತರನ್ನು ಆಗಾಗ ಕಾಡುವ ಇನ್ನೊಂದು ಸಮಸ್ಯೆ. ಈ ಭಾವನೆಯೂ ಸ್ವಲ್ಪ ಮಟ್ಟಿಗೆ ನಿಜವೇ. ಜಮಾಅತ್‌ನ ಹೊಣೆಗಾರರಿಗೂ ಅದರ ಅರಿವಿದೆ. ಆದ್ದರಿಂದ ಈಗಿನ ಧೋರಣೆ ಮತ್ತು ಕಾರ್ಯಕ್ರಮಗಳಲ್ಲಿ ಅದನ್ನು ಬಗೆಹರಿಸಲು ಒಂದಷ್ಟು ಪ್ರಯತ್ನಿಸಲಾಗಿದೆ. ಬೇರೆ ಬೇರೆ ಪ್ರಾದೇಶಿಕ ಭಾಷೆಗಳಲ್ಲಿ ಕುರ್‌ಆನ್‌ನ ಭಾಷಾಂತರ ಹಾಗೂ ಅದರ ಸಂಕ್ಷಿಪ್ತ ವ್ಯಾಖ್ಯಾನ, ಹದೀಸ್ ಗ್ರಂಥಗಳ ಪೈಕಿ ಯಾವುದಾದರೂ ಒಂದನ್ನು ಪ್ರಾದೇಶಿಕ ಭಾಷೆಗಳಿಗೆ ಅನುವಾದಿಸುವುದು, ಪ್ರಾದೇಶಿಕ ಭಾಷೆಗಳಲ್ಲಿ ಪತ್ರಿಕೆ ಮತ್ತು ನಿಯತಕಾಲಿಕಗಳ ಪ್ರಕಾಶನ, ಮುಸ್ಲಿಮೇತರರನ್ನು ದೃಷ್ಟಿಯಲ್ಲಿಟ್ಟು ಆಧುನಿಕ ಸಾಹಿತ್ಯಗಳನ್ನು ತಯಾರಿಸುವುದು, ಅರಬಿ ಮತ್ತು ಉರ್ದುವಿನಿಂದ ಸೂಕ್ತ ಪುಸ್ತಕಗಳನ್ನು ವಿವಿಧ ಪ್ರಾದೇಶಿಕ ಭಾಷೆಗಳಿಗೆ ಅನುವಾದಿಸಬಲ್ಲ ಹಾಗೂ ಈ ಭಾಷೆಗಳಲ್ಲಿ ಸ್ವಂತ ಪುಸ್ತಕಗಳನ್ನು ರಚಿಸಬಲ್ಲ ಅರ್ಹ ವ್ಯಕ್ತಿಗಳನ್ನು ತಯಾರಿಸುವುದು-ಇವು ಹಾಲಿ ಚತುರ್ವಾರ್ಷಿಕ ಅವಧಿಯಲ್ಲಿ ಹಾಕಿಕೊಳ್ಳಲಾಗಿರುವ ಕೆಲವು ಕಾರ್ಯಕ್ರಮಗಳು. ಈ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಪ್ರಕ್ರಿಯೆ ಈಗಾಗಲೇ ಆರಂಭಗೊಂಡಿದೆ ಮತ್ತು ಈ ಅವಧಿಯಲ್ಲಿ ಈ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿಯಾಗುವ ನಿರೀಕ್ಷೆಯಿದೆ.

ಆದರೆ ಈ ನಿಟ್ಟಿನಲ್ಲಿ ಕೆಲವು ವಿಚಾರಗಳು ಗಮನದಲ್ಲಿರಬೇಕಾದ ಅಗತ್ಯವಿದೆ-

ಮೊದಲನೆಯ ವಿಚಾರವೇನೆಂದರೆ, ಸಂದೇಶ ಪ್ರಚಾರ ಕಾರ್ಯವನ್ನು ಆರಂಭಿಸಲು ಸಾಹಿತ್ಯವನ್ನೇ ಆಶ್ರಯಿಸಿಕೊಂಡಿರುವುದು ಸರಿಯಲ್ಲ. ಇದು ಮುಸ್ಲಿಮರ ದೃಷ್ಟಿಯಿಂದಲೂ ಸಮಂಜಸವಾದುದಲ್ಲ. ಮುಸ್ಲಿಮೇತರರ ದೃಷ್ಟಿಯಿಂದ ಖಂಡಿತವಾಗಿಯೂ ಅದು ಸಮಂಜಸವಾದುದಲ್ಲ. ನಮ್ಮ ಮೊದಲ ಕೆಲಸ ಅವರೊಂದಿಗೆ ಸಂಬಂಧ ಬೆಳೆಸುವುದು ಮತ್ತು ಅವರ ಸುಖ ದುಃಖಗಳಲ್ಲಿ ಪಾಲ್ಗೊಳ್ಳುವುದು ಹಾಗೂ ಆ ಮೂಲಕ ಅವರ ವಿಶ್ವಾಸ ಮತ್ತು ಸದ್ಭಾವನೆಗೆ ಪಾತ್ರವಾಗುವುದು. ಅನಂತರ ಅವರ ಮನೋಭಾವ, ಅವರ ಆಲೋಚನೆಗಳು, ಅವರ ಸಮಸ್ಯೆಗಳು ಮತ್ತು ಗೊಂದಲಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಹಾಗೂ ಅವುಗಳನ್ನು ಮುಂದಿಟ್ಟುಕೊಂಡು ಅವರ ಬೌದ್ಧಿಕ ತೊಡಕುಗಳನ್ನು ಒಂದೊಂದಾಗಿ ಬಗೆಹರಿಸುವುದು ಮತ್ತು ಅವರ ಸಮಸ್ಯೆಗಳಲ್ಲಿ ಅವರಿಗೆ ಸರಿಯಾದ ಸಲಹೆಗಳನ್ನು ನೀಡುವುದು. ಈ ಕೆಲಸವನ್ನು ಸಾಹಿತ್ಯ ಕೃತಿಗಳು ಮಾಡಲಾರವು. ತಮ್ಮ ವಿವೇಕ, ಧರ್ಮ ಜ್ಞಾನ ಮತ್ತು ಜಾಣ್ಮೆಯ ಮಾತುಗಳು ಈ ನಿಟ್ಟಿನಲ್ಲಿ ಹೆಚ್ಚು ಪ್ರಭಾವಶಾಲಿ ಪಾತ್ರವಹಿಸಬಲ್ಲವು.

ಈ ನಿಟ್ಟಿನಲ್ಲಿ ಸಾಹಿತ್ಯ ನಿಮಗೆ ಒಂದು ಮಿತಿಯ ತನಕ ಮಾತ್ರ ನೆರವಾಗಬಲ್ಲದು. ಆದರೆ ಈ ತಿಳಿವು, ವಿವೇಕ ಮತ್ತು ಸಂಭಾಷಣೆಯ ಶೈಲಿಯನ್ನು ಸ್ವತಃ ನೀವೇ ನಿಮ್ಮಲ್ಲಿ ಉಂಟು ಮಾಡಬೇಕು. ಮಾತ್ರವಲ್ಲ ನೀವು ಸಾಹಿತ್ಯವನ್ನು ಯಾವ ರೀತಿ ಅರಗಿಸಿಕೊಳ್ಳಬೇಕೆಂದರೆ ನೀವೇ ಸ್ವತಃ ನಡೆದಾಡುವ ಸಾಹಿತ್ಯವಾಗಿ ಮಾರ್ಪಡಬೇಕು. ಆಗ ಮಾತ್ರ ನೀವು ನೈಜ ಸಂದೇಶ ಪ್ರಚಾರಕರೆನಿಸಿಕೊಳ್ಳಲು ಸಾಧ್ಯ.

ಎರಡನೆಯ ವಿಚಾರವೆಂದರೆ, ಭಾರತೀಯ ಸಮಾಜದಲ್ಲಿ ಅಶಿಕ್ಷಿತರು ಮತ್ತು ಅರೆ ಶಿಕ್ಷಿತರೇ ಬಹುಸಂಖ್ಯಾತರಾಗಿದ್ದಾರೆ. ವಿದ್ಯಾವಂತರು ಕೂಡಾ ಅಧ್ಯಯನದ ವಿಶೇಷ ಆಸಕ್ತಿಯನ್ನಾಗಲೀ ಚಿಂತನ ಮಂಥನ ನಡೆಸುವ ವಿಶೇಷ ಸಾಮರ್ಥ್ಯವನ್ನಾಗಲೀ ಹೊಂದಿರುವುದಿಲ್ಲ. ಹೆಚ್ಚಿನವರು ಮುಲಾಜಿಗಾಗಿ ಪುಸ್ತಕಗಳನ್ನು ತೆಗೆದುಕೊಳ್ಳುತ್ತಾರೆ ಮತ್ತು ಮನೆಗೆ ಕೊಂಡು ಹೋಗಿ ಇಟ್ಟು ಬಿಡುತ್ತಾರೆ. ಕೆಲವು ದಿನ ಕಳೆದ ನಂತರ ಅದನ್ನು ವಾಪಾಸು ತಂದು ಕೊಡುತ್ತಾರೆ. ಮಾತ್ರವಲ್ಲ ಅವರು ತಮ್ಮ ಮಾತುಗಳಿಂದ ತಾವು ಪುಸ್ತಕವನ್ನು ಸಂಪೂರ್ಣ ಓದಿದ್ದೇವೆ ಎಂಬ ಭಾವನೆ ಮೂಡಿಸಲು ಪ್ರಯತ್ನಿಸುತ್ತಾರೆ. ತಮ್ಮನ್ನು ವಿದ್ಯಾವಂತರೆಂದು ತಿಳಿದು ಕೊಳ್ಳಲಿ ಎಂಬ ಉದ್ದೇಶದಿಂದ ಕೆಲವರು ಪುಸ್ತಕಗಳನ್ನು ತೆಗೆದುಕೊಳ್ಳುತ್ತಾರೆ. ಓದುವ ಉದ್ದೇಶದಿಂದ ಪುಸ್ತಕವನ್ನು ಪಡೆಯುವವರು ಕೂಡಾ ಅಧ್ಯಯನ ಮತ್ತು ಚಿಂತನೆಯ ಸರಿಯಾದ ಶೈಲಿಯನ್ನು ತಿಳಿದು ಕೊಂಡು ಅದರೊಂದಿಗೆ ನ್ಯಾಯ ಪಾಲಿಸಬಲ್ಲವರು ತೀರಾ ಕಡಿಮೆ. ಪರಿಸ್ಥಿತಿಯ ಈ ವ್ಯಾಖ್ಯಾನವನ್ನು ನಿಜವೆಂದು ಭಾವಿಸುವುದಾದರೆ, ಅದು ನಿಜವೇ ಆಗಿದೆ, ನಾವು ಸತ್ಯಸಂದೇಶವನ್ನು ಪ್ರಚಾರ ಮಾಡಲು ಸಾಹಿತ್ಯ ಕೃತಿಗಿಂತಲೂ ಮಾತುಕತೆ ಮತ್ತು ವೈಯಕ್ತಿಕ ಭೇಟಿಯ ಮೂಲಕ ಕೆಲಸ ಸಾಧಿಸಬೇಕಾಗಿದೆ. ಮತ್ತು ಸಂಬೋಧಿತನು ಅಪೇಕ್ಷಿಸಿದ ನಂತರವೇ ಆತನಿಗೆ ಪುಸ್ತಕ ನೀಡುವುದು ಪ್ರಯೋಜನಕಾರಿಯಾಗಬಹುದು. ಆದರೆ ಭೇಟಿ ಮತ್ತು ಮಾತುಕತೆಯ ಸಂದರ್ಭದಲ್ಲಿ ಸಂಬೋಧಿತನು ನೀಡಲಾದ ಪುಸ್ತಕಗಳನ್ನು ಓದಿದ್ದಾನೆಯೇ ಇಲ್ಲವೇ, ಓದಿದ್ದರೆ ಎಷ್ಟನ್ನು ಅರ್ಥ ಮಾಡಿಕೊಂಡಿದ್ದಾನೆ ಎಂಬುದನ್ನು ಅಂದಾಜಿಸಬೇಕಾದುದು ಬಹಳ ಮುಖ್ಯ. ಒಂದು ವೇಳೆ ಆತನ ಮನದಲ್ಲಿ ಏನಾದರೂ ಪ್ರಶ್ನೆ ಅಥವಾ ಸಂದೇಹವಿದ್ದರೆ ಅದನ್ನು ಅತ್ಯಂತ ಯುಕ್ತಿಪೂರ್ಣ ಸಂವಾದದ ಮೂಲಕ ಬಗೆಹರಿಸಬೇಕಾಗಿದೆ.

ಮೂರನೆಯ ವಿಚಾರವೆಂದರೆ, ನಮ್ಮ ಬಳಿಯಿರುವ ಸಾಹಿತ್ಯಗಳನ್ನು ಮುಸ್ಲಿಮೇತರರನ್ನು ದೃಷ್ಟಿಯಲ್ಲಿಟ್ಟು ಬರೆಯಲಾಗಿಲ್ಲ ಎಂಬುದು ನಿಜವಾದರೂ ಅವುಗಳನ್ನು ಆಧುನಿಕ ಮನಸ್ಸನ್ನು ಮುಂದಿಟ್ಟುಕೊಂಡು ಬರೆಯಲಾಗಿದೆ. ಆದ್ದರಿಂದ ಅದು ಮುಸ್ಲಿಮರಂತೆಯೇ ಮುಸ್ಲಿಮೇತರರಿಗೂ ಅತ್ಯಂತ ಉಪಯುಕ್ತವಾಗಿದೆ. ಆದರೆ ನಾವು ಈ ಸಾಹಿತ್ಯಗಳ ಪೈಕಿ ಯಾವುದು ಮುಸ್ಲಿಮೇತರರಿಗೆ ಹೆಚ್ಚು ಉಪಯುಕ್ತವಾದುದು ಎಂಬುದನ್ನು ಕೂಡಾ ನೋಡಬೇಕಾಗಿದೆ. ಈ ಎಲ್ಲ ಸಾಹಿತ್ಯಗಳನ್ನು ನಿರುಪಯುಕ್ತ, ಕಾಲ ಹರಣ ಗೊಂಡದ್ದು ಮತ್ತು ಅಪ್ರಸ್ತುತವಾದುದು ಎಂದು

ಕರೆಯುವುದು ಅಜ್ಞಾನಯುತವೂ ನ್ಯಾಯಕ್ಕೆ ವಿರುದ್ಧವಾದುದೂ ಆಗಿದೆ. ಈ ಮಾತನ್ನು ಹೇಳುವವರು ಹೆಚ್ಚಾಗಿ ತಮ್ಮ ಜ್ಞಾನ ಮತ್ತು ಚಿಂತನೆಯ ಶ್ರೇಷ್ಠತೆಯ ಬಗ್ಗೆ ಅಗತ್ಯಕ್ಕಿಂತಲೂ ಹೆಚ್ಚು ಪ್ರಜ್ಞಾವಂತರಾಗಿರುವವರು. ಅಥವಾ ಅವರಿಗೆ ಪ್ರಾಚೀನ ಸಾಹಿತ್ಯದ ಬಗ್ಗೆ ಒಂದು ರೀತಿಯ ವೈಚಾರಿಕ ಭಿನ್ನತೆಯಿದ್ದಿರಬಹುದು. ಆದ್ದರಿಂದ ಅವರು ಅಪ್ರಸ್ತುತವಾದುದು ಎಂದು ಹೇಳಿ ಅದನ್ನು ತಿರಸ್ಕರಿಸ ಬಯಸುತ್ತಾರೆ. ಆದರೆ ನಾವು ಈ ಮಾರ್ಗವನ್ನು ಅಳವಡಿಸಲೇಬಾರದು. ನಾವು ಜ್ಞಾನ ಮತ್ತು ಚಿಂತನೆಯ ಹಾದಿಯಲ್ಲಿ ನಿರಂತರ ಮುಂದುವರಿಯುವ ಅಗತ್ಯವಿದೆ. ಅತ್ಯಾಧುನಿಕ ಸಾಹಿತ್ಯಗಳನ್ನು ತಯಾರಿಸಬೇಕಾಗಿದೆ. ಅದೇ ವೇಳೆ ಪ್ರಾಚೀನ ಸಾಹಿತ್ಯದಿಂದಲೂ ಸಂಪೂರ್ಣ ಪ್ರಯೋಜನ ಪಡೆಯಬೇಕು.

ನಾಲ್ಕನೆಯ ವಿಷಯವೇನೆಂದರೆ, ಮುಸ್ಲಿಮ್‌ಸಮಾಜಕ್ಕೆ ಅಗತ್ಯವುಳ್ಳ ಸೂಕ್ತ ಸಾಹಿತ್ಯಗಳನ್ನು ರಚಿಸುವುದು ಅಂತಹ ಕಷ್ಟದ ಕೆಲಸವೇನೂ ಅಲ್ಲ. ಯಾಕೆಂದರೆ ನಾವು ಸ್ವತಃ ಆ ಸಮಾಜದ ಭಾಗವಾಗಿದ್ದೇವೆ. ಸಮಾಜದ ಯೋಚನೆ ಮತ್ತು ಚಿಂತನಾ ಶೈಲಿ, ಅದರ ಸಂಪ್ರದಾಯ ಮತ್ತು ಆಚರಣೆಗಳು ಮತ್ತದರ ಗುಣಾವಗುಣಗಳೆಲ್ಲವನ್ನೂ ನಾವು ಚೆನ್ನಾಗಿ ಅರಿತಿದ್ದೇವೆ. ಆದ್ದರಿಂದ ಈ ಸಮಾಜದ ಸುಧಾರಣೆಗಾಗಿ ಯಾವಾಗ ಬೇಕೋ ಆಗ ಸಮರ್ಪಕ ಸಾಹಿತ್ಯವನ್ನು ರಚಿಸಬಹುದಾಗಿದೆ. ಇದಕ್ಕೆ ಧರ್ಮದ ಸರಿಯಾದ ಜ್ಞಾನ, ವಿಶ್ವಾಸದ ಕಾವು, ಪರಹಿತ ಚಿಂತನೆ, ಸುಧಾರಣೆ ಮತ್ತು ಸಂದೇಶ ಪ್ರಚಾರದ ಯುಕ್ತಿಪೂರ್ಣ ಶೈಲಿ, ಆಧಾರ ಪ್ರಮಾಣಗಳ ಶಕ್ತಿ ಮತ್ತು ಲೇಖನಿಯನ್ನು ದುಡಿಸಿಕೊಳ್ಳುವ ಸಾಮರ್ಥ್ಯದ ಅಗತ್ಯವಿದೆ. ಆದರೆ ಮುಸ್ಲಿಮೇತರ ಸಮಾಜದ ಸ್ಥಿತಿ ಇದಕ್ಕಿಂತ ಭಿನ್ನವಾದುದು. ಆ ಸಮಾಜದ ಬಗ್ಗೆ ನಮ್ಮ ಜ್ಞಾನ ಸೀಮಿತವಾದುದು. ಆ ಸಮಾಜದಿಂದ ದೂರವಿದ್ದುಕೊಂಡು ನಾವು ನಮ್ಮ ಮನೆ ಮತ್ತು ಕಚೇರಿಗಳಲ್ಲಿ ಮೇಜಿನ ಮುಂದೆ ಕುಳಿತು ಏನನ್ನು ಯೋಚಿಸಿದರೂ ಏನನ್ನು ಬರೆದರೂ ಅದು ದೇಶ ಬಾಂಧವರಿಗೆ ಹೆಚ್ಚು ಉಪಯುಕ್ತವಾಗಲಾರದು. ಮುಸ್ಲಿಮೇತರರ ಮನೋಧರ್ಮ, ಆಲೋಚನೆ ಮತ್ತು ಭಾವನೆಗಳು, ಚಿಂತನೆ ಮತ್ತು ವಿಚಾರಧಾರೆಗಳು, ಪ್ರವೃತ್ತಿ ಮತ್ತು ಒಲವುಗಳು ಹಾಗೂ ಚಳವಳಿ ಮತ್ತು ಸಂಘಟನೆಗಳನ್ನು ನಾವು ಚೆನ್ನಾಗಿ ಅರ್ಥ ಮಾಡಿಕೊಂಡಾಗ ಮಾತ್ರ ಅವರಿಗೆ ಉಪಯುಕ್ತವಾಗಬಲ್ಲ ಸಾಹಿತ್ಯವನ್ನು ರಚಿಸಲು ಸಾಧ್ಯವಾದೀತು. ಆದರೆ ಇದು ಸಾಧ್ಯವಾಗಬೇಕಾದರೆ ಅವರೊಂದಿಗೆ ನಮಗೆ ಗಾಢವಾದ ಸಂಬಂಧವಿರಬೇಕು. ನಾವು ಅವರಿಗೆ ನಿಕಟರಾಗಿ ಅವರ ಜತೆ ಸಂಪರ್ಕ ಮತ್ತು ಮಾತುಕತೆ ನಡೆಸಿ ಅವರನ್ನು ಹೆಚ್ಚು ಹೆಚ್ಚು ತಿಳಿದು ಕೊಳ್ಳಲು ಪ್ರಯತ್ನಿಸಬೇಕು. ಅವರಿಗೆ ಸತ್ಯ ಸಂದೇಶ ತಲುಪಿಸುವ ಪ್ರಕ್ರಿಯೆ ಆರಂಭವಾದಾಗಲೇ ನಮಗೆ ಯಾವ ಯಾವ ವಿಷಯದಲ್ಲಿ ಎಂತೆಂತಹ ಸಾಹಿತ್ಯಗಳು ಅಗತ್ಯವಿದೆ ಎಂಬುದು ಅರ್ಥವಾಗುತ್ತದೆ. ಆ ಕೃತಿಗಳಲ್ಲಿ ಸಾಕ್ಷ್ಯಾಧಾರಗಳನ್ನು ಮಂಡಿಸುವ ಶೈಲಿ ಯಾವ ರೀತಿಯಿರಬೇಕು ಮತ್ತು ಅದರ ಮೂಲಕ ಯಾವೆಲ್ಲಾ ಬೌದ್ಧಿಕ ತಡೆಗಳು ಮತ್ತು ವ್ಯಾವಹಾರಿಕ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಬೇಕು ಎಂಬುದರ

ಸ್ಪಷ್ಟ ಕಲ್ಪನೆ ನಮ್ಮಲ್ಲಿರಬೇಕು. ಬೇರೆ ಮಾತಿನಲ್ಲಿ ಹೇಳುವುದಾದರೆ ನಿಮ್ಮ ಸಂದೇಶ ಪ್ರಚಾರ ಕಾರ್ಯವು ಸಮರ್ಪಕ ಸಾಹಿತ್ಯದ ಸೃಷ್ಟಿಗೆ ಬುನಾದಿಯಾಗಿ ಮಾರ್ಪಡುವುದು. ಮಾತ್ರವಲ್ಲ ಸೂಕ್ತ ಸಾಹಿತ್ಯ ರಚಿಸಲು ನಿಮ್ಮನ್ನು ಅದು ಪ್ರೇರೇಪಿಸುವುದು. ಸಾಹಿತ್ಯ ಸೃಷ್ಟಿಗೆ ಅದು ದಿಕ್ಕನ್ನು ನಿಗದಿ ಪಡಿಸುವುದು. ಅದರ ಮಾರಾಟದ ಮಾಧ್ಯಮವಾಗಿ ಮಾರ್ಪಡುವುದು. ಆದರೆ ನಿಮ್ಮ ಸಂದೇಶ ಪ್ರಚಾರ ಚಟುವಟಿಕೆ ತೀವ್ರಗೊಳ್ಳದಿದ್ದರೆ ಮತ್ತು ನೀವು ಸೂಕ್ತ ಸಾಹಿತ್ಯ ಸೃಷ್ಟಿಯಾಗುವುದನ್ನು ಪ್ರತೀಕ್ಷಿಸುತ್ತಾ ಕುಳಿತುಕೊಂಡರೆ ಅದು ಎಂದೆಂದಿಗೂ ಸೃಷ್ಟಿಯಾಗಲಾರದು ಮತ್ತು ಸಂದೇಶ ಪ್ರಚಾರ ಕಾರ್ಯವೂ ಆರಂಭಗೊಳ್ಳಲಾರದು.

## ಭಾಷೆಯ ಅಪರಿಚಿತತೆ

ದೇಶಬಾಂಧವರಲ್ಲಿ ಸಂದೇಶ ಪ್ರಚಾರ ನಡೆಸುವ ನಿಟ್ಟಿನಲ್ಲಿರುವ ಇನ್ನೊಂದು ದೊಡ್ಡ ತೊಡಕೆಂದರೆ ಭಾಷೆಯ ಅಪರಿಚಿತತೆಯಾಗಿದೆ. ಕೇರಳ ಮತ್ತು ಕೆಲವು ಇತರ ರಾಜ್ಯಗಳನ್ನು ಬಿಟ್ಟರೆ ಭಾರತೀಯ ಮುಸ್ಲಿಮರು ಸಾಮಾನ್ಯವಾಗಿ ಉರ್ದು ಭಾಷೆಯವರಾಗಿದ್ದಾರೆ. ಅದೇ ವೇಳೆ ಉರ್ದುವಿನೊಂದಿಗೆ ಮುಸ್ಲಿಮೇತರರ ಸಂಬಂಧ ಕೇವಲ ನಾಮಮಾತ್ರಕ್ಕೆ ಸೀಮಿತವಾಗಿದೆ. ಒಂದೋ ಅವರು ಹಿಂದೀ ಮಾತಾಡುವವರಾಗಿದ್ದಾರೆ, ಇಲ್ಲವೇ ಅವರು ಪ್ರಾದೇಶಿಕ ಭಾಷೆ ಮಾತನಾಡುವವರಾಗಿದ್ದಾರೆ. ನಮ್ಮ ಕಾರ್ಯಕರ್ತರಿಗೆ ಈ ಭಾಷೆಗಳು ತಿಳಿದಿಲ್ಲ. ಆ ಭಾಷೆಗಳಲ್ಲಿ ಲೇಖನ ಬರೆಯುವ, ಭಾಷಣ ಮಾಡುವ ಸಾಮರ್ಥ್ಯ ಅವರಿಗಿಲ್ಲ. ಹಾಗಾಗಿ ಅವರು ದೇಶಬಾಂಧವರಿಗೆ ಸಂದೇಶ ತಲಪಿಸುವ ನಿಟ್ಟಿನಲ್ಲಿ ತಾವು ಅಸಹಾಯಕರೆಂದು ಸ್ವತಃ ಭಾವಿಸಿಕೊಳ್ಳುತ್ತಾರೆ.

ಇದು ಒಂದು ದೊಡ್ಡ ತೊಡಕು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಇದು ಸ್ವತಃ ನಮ್ಮ ಅಶ್ರದ್ಧೆ ಮತ್ತು ಜಮಾಅತೆ ಇಸ್ಲಾಮಿ ಹಿಂದ್‌ನ ನಿರ್ದೇಶನಗಳನ್ನು ಉಲ್ಲಂಘಿಸಿದುದರ ನೇರ ಪರಿಣಾಮವಾಗಿದೆ. 1948ರಲ್ಲಿ ಜಮಾಅತೆ ಇಸ್ಲಾಮಿ ಹಿಂದ್ ಪುನರ್ರಚನೆಗೊಂಡ ಕೂಡಲೇ ಭಾರತದಲ್ಲಿ ಇಸ್ಲಾಮಿ ಆಂದೋಲನದ ತನ್ನ ಕಾರ್ಯತಂತ್ರ ಏನಾಗಿರಬೇಕೆಂದು ತೀರ್ಮಾನಿಸಿತು. ಮಾತ್ರವಲ್ಲ ಅದು ಒಂದು ಸುದೀರ್ಘ ಕಾಲ ಜಮಾಅತ್‌ನ ಕಾರ್ಯತಂತ್ರವಾಗಿಯೇ ಮುಂದುವರಿದಿತ್ತು. ಆ ಕಾರ್ಯತಂತ್ರದಲ್ಲಿದ್ದ ಒಂದು ಪ್ರಮುಖ ಅಂಶ ಇಸ್ಲಾಮಿ ಆಂದೋಲನದ ಕಾರ್ಯಕರ್ತರು ಹಿಂದೀ ಹಾಗೂ ಇತರ ಪ್ರಾದೇಶಿಕ ಭಾಷೆಗಳನ್ನು ಕಲಿಯಬೇಕು ಮತ್ತು ಆದಷ್ಟು ಬೇಗ ಆ ಭಾಷೆಗಳಲ್ಲಿ ಇಸ್ಲಾಮಿ ಸಾಹಿತ್ಯಗಳನ್ನು ರಚಿಸಬೇಕು ಎಂಬುದಾಗಿತ್ತು. ಈಗ ಮೂವತ್ತು ವರ್ಷಗಳು ಕಳೆದಿವೆ. ನಾವು ಈವರೆಗೂ ಹಿಂದೀ ಮತ್ತಿತರ ಪ್ರಾದೇಶಿಕ ಭಾಷೆಗಳನ್ನು ಕಲಿಯದಿದ್ದರೆ ಅದನ್ನು ನಮ್ಮ ದೌರ್ಬಲ್ಯ ಮತ್ತು ಕರ್ತವ್ಯ ಚ್ಯುತಿ ಎಂದಲ್ಲದೆ ಬೇರೇನೆಂದು ಕರೆಯಲು ಸಾಧ್ಯ? ಅದೇನೇ ಇರಲಿ, ಹಿಂದೀ ಅಥವಾ ಪ್ರಾದೇಶಿಕ ಭಾಷೆಗಳನ್ನು ಕಲಿಯುವುದು ಇಸ್ಲಾಮೀ ಆಂದೋಲನ

ಮತ್ತು ಸತ್ಯ ಸಂದೇಶ ಪ್ರಚಾರಕ್ಕೆ ತೀರ ಅನಿವಾರ್ಯವಾದುದು ಎಂದು ನಾವು ತಿಳಿದು ಕೊಳ್ಳಬೇಕು. ಇದು ಅಂತಹ ಕಷ್ಟದ ಕೆಲಸವೇನೂ ಅಲ್ಲ. ಯಾವುದೇ ಭಾಷಾ ಪರಿಸರದಲ್ಲಿ ಜೀವಿಸುವ ವ್ಯಕ್ತಿ ಮೊದಲು ಅದನ್ನು ಅಷ್ಟಿಷ್ಟು ಮಾತನಾಡಲು ಮತ್ತು ಬರೆಯಲು ಕಲಿಯುತ್ತಾನೆ. ಅನಂತರ ಸ್ವಲ್ಪ ಹೆಚ್ಚು ಗಮನಹರಿಸಿದರೆ ಆತ ಸರಿಯಾದ ಭಾಷೆಯನ್ನು ಕಲಿತುಕೊಳ್ಳುತ್ತಾನೆ. ಸಾಹಿತ್ಯಿಕ ಭಾಷೆಯನ್ನು ಕಲಿಯಲು ಸಮಯ ತಗಲುತ್ತದೆ. ಆದರೆ ಅದಕ್ಕೆ ಮನಸ್ಸಿರುವವರು ಸಮಯವನ್ನೂ ವಿನಿಯೋಗಿಸುತ್ತಾರೆ ಮತ್ತು ಈ ಕೊರತೆಯನ್ನೂ ನೀಗಿಸಿ ಬಿಡುತ್ತಾರೆ. ಆದರೆ ನಮ್ಮ ಸಾಮಾನ್ಯ ಕಾರ್ಯಕರ್ತರ ಮಟ್ಟಿಗೆ ಹೇಳುವುದಾದರೆ ಅವರು ಹಿಂದಿ ಮತ್ತು ಪ್ರಾದೇಶಿಕ ಭಾಷೆಗಳನ್ನು ಮಾತನಾಡಲು ಮತ್ತು ಸ್ವಲ್ಪ ಮಟ್ಟಿಗೆ ಬರೆಯಲು ಕಲಿತರೆ ಅಷ್ಟೇ ಸಾಕು. ಸ್ವತಃ ಸರಕಾರವೇ ವಿವಿಧ ಭಾಷೆಗಳನ್ನು ಕಲಿಯಲಿಕ್ಕಾಗಿ ಪುಸ್ತಕಗಳನ್ನು ಹೊರತಂದಿದೆ. ಇವುಗಳ ಮೂಲಕ ಸಂಬಂಧಿತ ಭಾಷೆಗಳನ್ನು ಸುಲಭದಲ್ಲೇ ಕಲಿಯಬಹುದಾಗಿದೆ.

ಖಂಡಿತವಾಗಿಯೂ ಉರ್ದುವಿನ ರಕ್ಷಣೆ ಮತ್ತು ಪೋಷಣೆ ಭಾರತೀಯ ಮುಸ್ಲಿಮರ ಮಟ್ಟಿಗೆ ವಿವಿಧ ದೃಷ್ಟಿಯಿಂದ ಬಹಳ ಅಗತ್ಯವಾದುದು. ಆದರೆ ಹಿಂದೀ ಮತ್ತು ಇತರ ಪ್ರಾದೇಶಿಕ ಭಾಷೆಗಳನ್ನು ಕಲಿಯುವುದು ಕೂಡಾ ಅಷ್ಟೇ ಆಗತ್ಯವಾದದ್ದು. ಇದಿಲ್ಲದೆ ಅವರು ಪ್ರಾಪಂಚಿಕವಾಗಿ ಮುಂದುವರಿಯಲಾರರು. ಮಾತ್ರವಲ್ಲ ಧರ್ಮ ಪ್ರಚಾರದ ಕಾರ್ಯ ಈಡೇರಿಸಲಿಕ್ಕೂ ಅವರಿಗೆ ಸಾಧ್ಯವಾಗದು. ಈ ಕೆಲಸವನ್ನು ಅವರು ಯಾವುದೇ ಪರಿಸ್ಥಿತಿಯಲ್ಲೂ ಎಷ್ಟು ಬೆಲೆ ತೆತ್ತಾದರೂ ಮಾಡಲೇಬೇಕು.

## ನವ ಮುಸ್ಲಿಮರ ಸಮಸ್ಯೆಗಳು

### ವಿವಾಹದ ಸಮಸ್ಯೆ

ಸತ್ಯ ಸಂದೇಶವನ್ನು ಮುಟ್ಟಿಸುವುದೇನೋ ಸುಲಭ. ಆದರೆ ಸತ್ಯವನ್ನು ಸ್ವೀಕರಿಸುವವರ ಸಮಸ್ಯೆಗಳನ್ನು ಬಗೆಹರಿಸುವುದು ಸುಲಭವಲ್ಲ. ಮುಸ್ಲಿಮ್ ಸಮುದಾಯ ಆ ಸಮಸ್ಯೆಗಳನ್ನು ಬಗೆಹರಿಸುವ ಸ್ಥಿತಿಯಲ್ಲಿಲ್ಲ ಎಂಬುದು ನಮ್ಮ ಕಾರ್ಯಕರ್ತರು ಮುಂದಿಡುವ ಇನ್ನೊಂದು ವಾದ. ಸುಮಾರು ಹದಿನೈದು ಇಪ್ಪತ್ತು ವರ್ಷ ಹಿಂದೆ ಜಮಾಅತ್‌ನ ಓರ್ವ ವಿಚಾರಶೀಲ ವ್ಯಕ್ತಿ ಸತ್ಯ ಸಂದೇಶ ಪ್ರಚಾರದ ಬಗೆಗಿನ ನನ್ನ ಆಸಕ್ತಿಯನ್ನು ಗಮನಿಸಿ ಒಂದು ಪ್ರಶ್ನೆ ಕೇಳಿದ್ದರು. "ನೀವು ಇದರ ಪರಿಣಾಮಗಳ ಬಗ್ಗೆ ಯೋಚಿಸಿದ್ದೀರಾ? " ನಾನು ಆ ವ್ಯಕ್ತಿಯೊಡನೆ, "ನೀವು ಸತ್ಯದ ಸಂದೇಶ ತಲಪಿಸಿದ ಕಾರಣ ಗಲಭೆಗಳಾಗ ಬಹುದೆಂದು ಭಾವಿಸಿದ್ದೀರಾ? ನಾನಂತೂ ಆ ಸಂಕಷ್ಟವನ್ನು ಸಹಿಸಲು ಸಿದ್ಧನಾಗಿದ್ದೇನೆ. ನಮ್ಮ ಓರ್ವ ಸೋದರನಿಗೆ ಸತ್ಯ ಮಾರ್ಗ ತೋರಿಸಿದ ಕಾರಣದಿಂದ ಈ ದೇಶದಲ್ಲಿ ನಮ್ಮ ಪ್ರಾಣ, ಸೊತ್ತು ಮತ್ತು ಮಾನಕ್ಕೆ ಅಪಾಯವೊದಗುತ್ತದೆ ಎಂದಾದರೆ ನಾನು ಆ ತ್ಯಾಗಕ್ಕೆ ಸಿದ್ಧನಿದ್ದೇನೆ. ಇಂದು ಗಲಭೆಗಳಾಗುವುದು ತಪ್ಪುತಿಳುವಳಿಕೆ ಮತ್ತು ವದಂತಿಗಳ ಕಾರಣದಿಂದಾಗಿ ಮಾತ್ರ. ಕೆಲವೊಮ್ಮೆ

ಯಾವನಾದರೊಬ್ಬ ಗೂಂಡಾನ ಗೂಂಡಾಗಿರಿಯ ದುಷ್ಪರಿಣಾಮವನ್ನು ಇಡೀ ಸಮಾಜ ಎದುರಿಸಬೇಕಾಗುತ್ತದೆ. ನಿಜವಾಗಿ ಗೂಂಡಾ ವ್ಯಕ್ತಿಗೆ ಯಾವುದೇ ಧರ್ಮವಿರುವುದಿಲ್ಲ. ಆತ ಯಾವುದೇ ಸಮಾಜದ ಪ್ರತಿನಿಧಿಯೂ ಆಗಿರುವುದಿಲ್ಲ. ಆತ ಒಬ್ಬ ಗೂಂಡಾ ಮಾತ್ರ ಆಗಿರುತ್ತಾನೆ. ಇನ್ನು ಇಸ್ಲಾಮಿನ ಸಂದೇಶ ತಲಪಿಸಿದ ತಪ್ಪಿಗಾಗಿ ನಾವು ವಧಿಸಲ್ಪಟ್ಟರೆ ಆ ತ್ಯಾಗವು ಅಲ್ಲಾಹನ ಮಾರ್ಗದಲ್ಲಿ ಆತನ ಸಂಪ್ರೀತಿಗಾಗಿ ನಡೆಸಿದ ಬಲಿದಾನವೆಂದು ಪರಿಗಣಿಸಲ್ಪಡುತ್ತದೆ. ಅದರಿಂದ ಸಮುದಾಯ ಜೀವಂತವಾಗುತ್ತದೆ. ಧರ್ಮದೊಂದಿಗಿನ ಸಮುದಾಯದ ಸಂಬಂಧ ಮತ್ತಷ್ಟು ಗಾಢವಾಗುತ್ತದೆ ಮತ್ತು ಇಹದಲ್ಲೂ ಪರದಲ್ಲೂ ಅದರ ಫಲಿತಾಂಶ ಉತ್ತಮವಾಗಿರುತ್ತದೆ". ಎಂದು ಉತ್ತರಿಸಿದೆ. ಆ ವ್ಯಕ್ತಿ "ಇಲ್ಲ ನಾನು ಹಾಗೇನೂ ಹೇಳುತ್ತಿಲ್ಲ. ನಾನು ನವಮುಸ್ಲಿಮರ ವಿವಾಹದ ಬಗ್ಗೆ ತಮ್ಮೊಡನೆ ಹೇಳುತ್ತಿದ್ದೇನೆ."ಎಂದರು. "ಯಾರು ಸತ್ಯ ಸಂದೇಶದ ಪ್ರಚಾರಕ್ಕಾಗಿ ಎದ್ದು ನಿಂತಿರುವರೋ ಅವರು ನವ ಮುಸ್ಲಿಮರು ಮತ್ತವರ ಸಂತಾನಕ್ಕೆ ತಮ್ಮ ಪುತ್ರ, ಪುತ್ರಿಯರನ್ನು ವಿವಾಹ ಮಾಡಿಸಿಕೊಡಲಿಕ್ಕೂ ಸಿದ್ಧರಾಗಿರಬೇಕಾಗುತ್ತದೆ. ನಾನಂತೂ ಅದಕ್ಕೆ ಸನ್ನದ್ಧನಾಗಿದ್ದೇನೆ."

ಹದಿನೈದು ಇಪ್ಪತ್ತು ವರ್ಷ ಹಿಂದೆ ಹೇಳಲಾದ ಈ ಮಾತು ಇಂದಿಗೂ ನಮ್ಮ ಮಟ್ಟಿಗೆ ಚಿಂತನಾರ್ಹ ಮತ್ತು ಗಮನಾರ್ಹವಾಗಿದೆ. ಅಜ್ಞಾನಜನ್ಯ ಮತ್ತು ಪರಕೀಯ ಕಲ್ಪನೆಗಳಲ್ಲಿರುವಂತಹ ಅಸ್ಪೃಶ್ಯತೆಯ ಕಲ್ಪನೆ ನಮ್ಮಲ್ಲಿಲ್ಲ. ಆದರೆ ಉಚ್ಚ ನೀಚತೆಯ ಕಲ್ಪನೆ ಸ್ವಲ್ಪ ಮಟ್ಟಿಗಾದರೂ ನಮ್ಮಲ್ಲಿದೆ. ಗೋತ್ರದಿಂದ ಹೊರಗೆ ವಿವಾಹ ಸಂಬಂಧ ನಡೆಸದಿರುವ ಸಂಪ್ರದಾಯವನ್ನೂ ನಾವು ಕಾಣುತ್ತೇವೆ. ಐವತ್ತು ವರ್ಷಗಳ ಹಿಂದೆ ಈ ಎರಡು ವಿಚಾರಗಳಲ್ಲಿಯೂ ಹೆಚ್ಚಿನ ತೀವ್ರತೆ ಇದ್ದಿತು. ಮುಸ್ಲಿಮೇತರರ ವಿವಾಹದ ಸಮಸ್ಯೆಯೂ ಇದರ ಒಂದು ಶಾಖೆಯಾಗಿತ್ತು. ಯಾಕೆಂದರೆ ಅವರು ಮುಸ್ಲಿಮರ ಎಲ್ಲ ಗೋತ್ರಗಳಿಂದಲೂ ಹೊರಗಿರುವವರಾಗಿದ್ದು ಅವರೊಂದಿಗೆ ವಿವಾಹ ಸಂಬಂಧ ಬೆಳೆಸಲು ಯಾರೂ ಇಷ್ಟಪಡದೇ ಇರುವಂತಹ ಸ್ಥಿತಿಯಿತ್ತು. ಮುಸ್ಲಿಮ್ ಸಮಾಜದ ಸಾಮಾನ್ಯ ಪರಿಸ್ಥಿತಿ ಹೇಗಿತ್ತೆಂದರೆ ಕೆಲವು ಪ್ರದೇಶ ಮತ್ತು ಗೋತ್ರಗಳಲ್ಲಿ ಹೆಣ್ಮಕ್ಕಳು ಕುಳಿತಲ್ಲೇ ಮುದುಕಿಯರಾಗಿ ಬಿಡುತ್ತಿದ್ದರು. ಆದರೆ ಅವರ ವಿವಾಹ ನಡೆಯುತ್ತಿರಲಿಲ್ಲ. ಯಾಕೆಂದರೆ ಅವರಿಗೆ ಗೋತ್ರದ ಒಳಗೆ ಸೂಕ್ತ ವರ ಸಿಗುತ್ತಿರಲಿಲ್ಲ. ಗೋತ್ರದ ಹೊರಗೆ ವಿವಾಹ ನಡೆಸುವುದನ್ನು ಅವರು ತಮ್ಮ ಘನತೆಗೆ ಕುಂದೆಂದು ಭಾವಿಸುತ್ತಿದ್ದರು. ನವಮುಸ್ಲಿಮರಿಗೆ ಸಂಬಂಧಿಸಿದಂತೆಯೂ ಇದೇ ಪರಿಸ್ಥಿತಿಯಿತ್ತು. ಒಂದೋ ಅವರ ವಿವಾಹ ನಡೆಯುತ್ತಿರಲಿಲ್ಲ. ಇಲ್ಲವೇ ಅವರಿಗೆ ಸೂಕ್ತವಲ್ಲದ ಅಥವಾ ಕಡಿಮೆ ಸ್ಥಾನಮಾನದ ವಿವಾಹ ಸಂಬಂಧಗಳು ನಡೆಯುತ್ತಿದ್ದವು. ತಮ್ಮ ಪುತ್ರ ಪುತ್ರಿಯರಿಗೆ ಸೂಕ್ತ ಮತ್ತು ಸ್ಥಾನಮಾನಕ್ಕೆ ತಕ್ಕುದಾದ ವಿವಾಹ ಸಂಬಂಧ ಸಿಗಬೇಕೆಂಬ ಬೇಡಿಕೆಯೊಂದಿಗೆ ಕುಟುಂಬ ಸಮೇತ ಇಸ್ಲಾಮ್ ಸ್ವೀಕರಿಸಲು ಕೆಲ ಕುಟುಂಬಗಳು ಮುಂದೆ ಬಂದ ಘಟನೆಗಳೂ ಇದ್ದವು. ಆದರೆ ಮುಸ್ಲಿಮ್ ಸಮುದಾಯ ಅವರಿಗೆ ಸೂಕ್ತ ಸಂಬಂಧ ಒದಗಿಸಿಕೊಡಲು

ಮುಂದಾಗಲಿಲ್ಲ ಮತ್ತು ಅವರು ರಹಸ್ಯವಾಗಿ ನಮಾಝ್ ಮಾಡುತ್ತಲೂ ಉಪವಾಸ ಆಚರಿಸುತ್ತಲೂ ಇದ್ದರು. ಕೊನೆಗೆ ಬಾಹ್ಯ ನೋಟಕ್ಕೆ ಸತ್ಯನಿಷೇಧದ ಸ್ಥಿತಿಯಂತೆ ಕಾಣುವ ಅವಸ್ಥೆಯಲ್ಲೇ ಅವರು ಮರಣವನ್ನಪ್ಪಬೇಕಾಯಿತು. ಅವರ ಕುಟುಂಬಗಳು ಬಾಹ್ಯವಾಗಿಯೂ ಆಂತರಿಕವಾಗಿಯೂ ಕುಫ್ರ್‌ನ ತೆಕ್ಕೆಗೆ ಸೇರಿಕೊಂಡಿತು. ಇದು ಎಷ್ಟು ದೊಡ್ಡ ದುರಂತ! ಇದರ ಪರಿಣಾಮವನ್ನು ಮುಸ್ಲಿಮ್ ಸಮಾಜ ಇಹ ಮತ್ತು ಪರಲೋಕದಲ್ಲಿ ಯಾವ ರೀತಿ ಎದುರಿಸಬೇಕಾಗಬಹುದು ಎಂದು ಯೋಚಿಸಿದಾಗಲೇ ಮೈನವಿರೇಳುತ್ತದೆ. ಈ ಪರಿಸ್ಥಿತಿಯನ್ನು ಪ್ರಥಮ ಅವಕಾಶದಲ್ಲೇ ಬದಲಿಸಬೇಕಾದ ಅಗತ್ಯವಿದೆ. ಮುಸ್ಲಿಮರ ವಿವಿಧ ಗೋತ್ರಗಳ ಮಧ್ಯೆ ವಿವಾಹ ಸಂಬಂಧ ಏರ್ಪಡಿಸುವ ವಿಷಯ ಮತ್ತು ನವ ಮುಸ್ಲಿಮರ ವಿವಾಹದ ವಿಚಾರದಲ್ಲೂ ಈ ಪರಿವರ್ತನೆಯನ್ನು ತರಬೇಕಾದ ಅಗತ್ಯವಿದೆ.

ದುರದೃಷ್ಟವಶಾತ್ ನಮ್ಮ ಕೆಲ ಉಲಮಾಗಳು ಕುರ್‌ಆನ್ ಮತ್ತು ಹದೀಸ್‌ಗಳ ಸ್ಪಷ್ಟ ಶಿಕ್ಷಣಕ್ಕೆ ತದ್ವಿರುದ್ಧವಾಗಿರುವ ವೃತ್ತಿ ಮತ್ತು ಜನಾಂಗದ ಆಧಾರದಲ್ಲಿ ಉಚ್ಚನೀಚತೆಯ ಈ ಅಜ್ಞಾನಜನ್ಯ ಕಲ್ಪನೆಗೆ ಅಧಿಕೃತ ಮಾನ್ಯತೆಯನ್ನು ಕೊಟ್ಟಿದ್ದಾರೆ. ಆದ್ದರಿಂದ ಅವರು ಸ್ವತಃ ತಮ್ಮ ಫತ್ವಾಗಳಿಗೆ ವಿರುದ್ಧವಾಗಿ ಏನಾದರೂ ಕ್ರಮ ಕೈಗೊಳ್ಳಬಹುದೆಂದು ನಿರೀಕ್ಷಿಸಲಾಗದು. ಆದರೆ ಇಸ್ಲಾಮೀ ಆಂದೋಲನದ ಜತೆ ಸಂಬಂಧವುಳ್ಳವರು ಈ ಸಾಮಾಜಿಕ ಕೆಡುಕನ್ನು ನಿರ್ಮೂಲಗೊಳಿಸಲು ತೀವ್ರ ಪ್ರಯತ್ನ ನಡೆಸಬಹುದೆಂದು ಖಂಡಿತವಾಗಿಯೂ ನಿರೀಕ್ಷೆಯಿಟ್ಟುಕೊಳ್ಳಬಹುದು.

ಆದರೆ ಮುಸ್ಲಿಮೇತರರಲ್ಲಿ ಸಂದೇಶ ಪ್ರಚಾರ ಕಾರ್ಯ ನಡೆಸದಿರುವುದಕ್ಕೆ ಇದು ಯಾವ ರೀತಿ ಒಂದು ನೆಪವಾಗುತ್ತದೆ ಎಂಬುದು ನನಗಂತೂ ಅರ್ಥವಾಗಿಲ್ಲ. ಒಂದು ವೇಳೆ ನಮ್ಮ ಸಮುದಾಯ ಯಾವುದಾದರೊಂದು ಕೆಡುಕಿನಲ್ಲಿ ಬಿದ್ದಿದೆಯೆಂದಾದರೆ ನಾವು ಪ್ರಥಮ ಅವಕಾಶದಲ್ಲೇ ಆ ಕೆಡುಕನ್ನು ದೂರೀಕರಿಸಲು ಎದ್ದೇಳಬೇಕೇ ವಿನಾ ಅದನ್ನು ನೆಪವಾಗಿಸಿಕೊಂಡು ಅದಕ್ಕಿಂತ ದೊಡ್ಡದಾದ ಬೇರಾವುದೋ ಕೆಡುಕನ್ನು ಮಾಡುವುದಲ್ಲ. ಮುಸ್ಲಿಮೇತರರಿಗೆ ಸಂದೇಶ ತಲಪಿಸುವ ನಿಟ್ಟಿನಲ್ಲಿ ನಮ್ಮ ಮೇಲಿರುವ ಹೊಣೆಗಾರಿಕೆಗಳನ್ನು ನಿರ್ಲಕ್ಷಿಸಿ ಅವರನ್ನೂ ನಮ್ಮನ್ನೂ ನರಕದ ಶಿಕ್ಷೆಗೆ ಪಾತ್ರಗೊಳಿಸುವುದು ಎಷ್ಟರ ಮಟ್ಟಿಗೆ ಸರಿ? ಒಂದು ವೇಳೆ ಇದು ನಾವು ಯೋಚಿಸುವ ರೀತಿಯೆಂದಾದರೆ ಇದು ಅತ್ಯಂತ ದೋಷಪೂರ್ಣ ಹಾಗೂ ಅಪಾಯಕಾರಿ ಯೋಚನಾ ಶೈಲಿಯಾಗಿದೆ. ನಾವು ನಮ್ಮದೇ ಸಮಾಜದ ಒಳಗೆ ಇಷ್ಟು ಸಣ್ಣ ಬದಲಾವಣೆಯನ್ನೂ ತರಲು ಸಿದ್ಧರಿಲ್ಲ ಎಂದಾದರೆ ನಮ್ಮೊಂದಿಗೆ ಇಸ್ಲಾಮಿನ ಸಂದೇಶ, ಇಸ್ಲಾಮೀ ಆಂದೋಲನ ಮತ್ತು ಇಸ್ಲಾಮೀ ಕ್ರಾಂತಿಯ ಮಾತು ಹೇಳಿದ್ದಾದರೂ ಹೇಗೆ? ಸಮಾಜವನ್ನು ಇಸ್ಲಾಮೀ ಶಿಕ್ಷಣದ ಅಚ್ಚಿನಲ್ಲಿ ಪಳಗಿಸದೆ ಇಸ್ಲಾಮೀ ಕ್ರಾಂತಿಯನ್ನು ತರಲು ನಮಗೆ ಸಾಧ್ಯವಾದೀತೆ?

ಹಾಗಿದ್ದರೂ ಈ ದೃಷ್ಟಿಯಿಂದ ಮುಸ್ಲಿಮ್ ಸಮುದಾಯದ ಸದ್ಯದ ಪರಿಸ್ಥಿತಿ ಅಷ್ಟೊಂದು ನಿರಾಶಾಜನಕವಲ್ಲ. ನಾವು ಸ್ವತಃ ನಿರಾಶೆಯನ್ನು ನಮ್ಮ ಮೇಲೆ ಹೇರಿಕೊಂಡರೆ ಅಥವಾ ಮುಸ್ಲಿಮೇತರರಲ್ಲಿ ಸಂದೇಶ ಪ್ರಚಾರ ಕಾರ್ಯ ನಡೆಸದೇ ಇರಲಿಕ್ಕೆ ಈ ಕ್ಷುಲ್ಲಕ ಕಾರಣವನ್ನೇ ಧರ್ಮಸಮ್ಮತ ಕಾರಣವೆಂದು ತಿಳಿಯಲಾರಂಭಿಸಿದ್ದರೆ ಅದು ಬೇರೆ ಮಾತು. ವಾಸ್ತವವೆಂದರೆ ಮುಸ್ಲಿಮ್ ಸಮುದಾಯದ ಪರಿಸ್ಥಿತಿ ಮೆಲ್ಲಮೆಲ್ಲನೆ ಬದಲಾಗುತ್ತಿದೆ. ಐವತ್ತು ವರ್ಷಗಳ ಹಿಂದೆ ಇದ್ದಂತಹ ಪರಿಸ್ಥಿತಿ ಈಗ ಇಲ್ಲ. ಪರಿಸ್ಥಿತಿ ಹೀಗೆಯೇ ಉತ್ತಮಗೊಳ್ಳುತ್ತಾ ಹೋದರೆ ಮತ್ತು ಸುಧಾರಣಾ ಕೆಲಸಗಳು ಹೀಗೆಯೇ ಸಕ್ರಿಯವಾಗಿದ್ದರೆ ಪರಿಸ್ಥಿತಿ ಮತ್ತಷ್ಟು ಉತ್ತಮಗೊಳ್ಳಬಹುದು. ಆರ್ಥಿಕ ಸುಭಿಕ್ಷೆ, ಶೈಕ್ಷಣಿಕ ಮತ್ತು ಭೌತಿಕ ಉನ್ನತಿ, ಪಶ್ಚಿಮದಿಂದ ಬಂದಿರುವ ಪ್ರಗತಿಪರ ಚಿಂತನೆ, ಇಸ್ಲಾಮೀ ಆಂದೋಲನಗಳ ಹೆಚ್ಚುತ್ತಿರುವ ಪ್ರಭಾವ ಮತ್ತು ಸುಧಾರಣಾ ಕೆಲಸಗಳಿಂದಾಗಿ ಮುಸ್ಲಿಮ್ ಸಮಾಜದಲ್ಲಿ ಉಚ್ಚನೀಚತೆಯ ಕಲ್ಪನೆ ತಣ್ಣಗಾಗುತ್ತಿದೆ. ವಿಭಿನ್ನ ಗೋತ್ರಗಳ ಮಧ್ಯೆ ವಿವಾಹ ಸಂಬಂಧಗಳು ಹೆಚ್ಚುತ್ತಿವೆ. ತಥಾಕಥಿತ ಉನ್ನತ ಮತ್ತು ಕೆಳ ಸ್ತರದ ಗೋತ್ರಗಳ ಮಧ್ಯೆಯೂ ವಿವಾಹ ಸಂಬಂಧಗಳು ಏರ್ಪಡುತ್ತಿವೆ. ಅಲ್ಲದೆ ನವ ಮುಸ್ಲಿಮರ ವಿವಾಹದ ಸಮಸ್ಯೆಯೂ ಹಿಂದಿಗೆ ಹೋಲಿಸಿದರೆ ಈಗ ಬಹಳಷ್ಟು ಸುಲಭಗೊಂಡಿದೆ. ಕೆಲವೆಡೆಗಳಲ್ಲಿ, ಉತ್ತರ ಪ್ರದೇಶದ ಮಟ್ಟಿಗೆ ಹೇಳುವುದಾದರೆ ಬಹಳಷ್ಟು ಕಡೆಗಳಲ್ಲಿ ಪರಿಸ್ಥಿತಿ ಎಷ್ಟು ಬದಲಾಗಿದೆಯೆಂದರೆ ನವಮುಸ್ಲಿಮ್ ಅಸ್ಪೃಶ್ಯರಿಗೂ ವಿವಾಹದ ವಿಷಯದಲ್ಲಿ ಯಾವುದೇ ತೊಂದರೆ ಎದುರಾಗುತ್ತಿಲ್ಲ. ಹೊಸದಾಗಿ ಇಸ್ಲಾಮ್ ಸ್ವೀಕರಿಸಿದ ವ್ಯಕ್ತಿ ಪ್ರಾಮಾಣಿಕನೂ ತನ್ನ ಹೆಂಡತಿ ಮಕ್ಕಳನ್ನು ನೋಡಿಕೊಳ್ಳಬಲ್ಲವನೂ ಆಗಿರಬೇಕೆಂದು ಮಾತ್ರ ನಿರೀಕ್ಷಿಸಲಾಗುತ್ತದೆ. ಖಂಡಿತವಾಗಿಯೂ ಕೆಲ ರಾಜ್ಯಗಳಲ್ಲಿ ಪರಿಸ್ಥಿತಿ ಈಗಲೂ ಸಂದಿಗ್ಧವಾಗಿದೆ. ಆ ರಾಜ್ಯಗಳಲ್ಲಿ ನವಮುಸ್ಲಿಮರ ವಿವಾಹ ಒಂದು ಸಮಸ್ಯೆಯಾಗಿ ಮಾರ್ಪಡಬಹುದು. ಆದರೆ 'ಇಸ್ಲಾಮೀ ಕ್ರಾಂತಿ'ಯ ಘೋಷಣೆ ಹೊರಡಿಸಿ ಎಚ್ಚೆತ್ತಿರುವವರು ಈ ಸಾಮಾಜಿಕ ಕೆಡುಕಿನ ನಿವಾರಣೆಗಾಗಿ ತಮ್ಮದೇ ಆದ ಹೋರಾಟ ನಡೆಸಬೇಕಾಗಿದೆ. ಆ ನಿಟ್ಟಿನಲ್ಲಿ ಸಮುದಾಯದ ಮುಂದೆ ತಮ್ಮದೇ ವ್ಯಾವಹಾರಿಕ ಮಾದರಿಯನ್ನು ಮುಂದಿಡಬೇಕಾಗಿದೆ. ಪ್ರಳಯ ಕಾಲದ ತನಕ ಈ 'ಉತ್ತಮ ಮಾದರಿ'ಯ ಪ್ರತಿಫಲ ಅವರಿಗೆ ಸಿಗುತ್ತಲಿರುವುದು.

ಪ್ರವಾದಿ ಮುಹಮ್ಮದ್(ಸ) ಹೀಗೆಂದಿದ್ದಾರೆ:

"ಯಾವನಾದರೂ ಇಸ್ಲಾಮಿನಲ್ಲಿ ಒಂದು ಉತ್ತಮ ಆದರ್ಶವನ್ನು ಸ್ಥಾಪಿಸಿದರೆ ಆತನಿಗೆ ಅದರ ಪ್ರತಿಫಲ ಸಿಗುವುದು. ಆ ಆದರ್ಶವನ್ನು ಅನುಸರಿಸುವವರ ಕ್ರಿಯೆಯ ಪ್ರತಿಫಲವೂ ಅವರಿಗೆ ಸಿಗುವುದು. ಆದರೆ ಅವರ ಪುಣ್ಯದಲ್ಲಿ ಯಾವುದೇ ಕಡಿತ ಉಂಟಾಗಲಾರದು."

ಒಂದು ವೇಳೆ ಈ ಸಮಸ್ಯೆ ಯಾವುದಾದರೂ ರಾಜ್ಯದಲ್ಲಿ ಅಥವಾ ಜಿಲ್ಲೆಯಲ್ಲಿ ಬಗೆಹರಿಯದಿದ್ದರೆ ಖಂಡಿತವಾಗಿಯೂ ಇತರ ರಾಜ್ಯ ಅಥವಾ ಜಿಲ್ಲೆಯಲ್ಲಿ ಖಂಡಿತವಾಗಿಯೂ ಬಗೆಹರಿಯುವುದು. ಶರತ್ತೇನೆಂದರೆ ನಮ್ಮ ಹೊಣೆಗಾರರಿಗೆ ಈ ವಿಷಯದ ಬಗ್ಗೆ ಸಕಾಲದಲ್ಲಿ

ತಿಳಿವಳಿಕೆ ಇರಬೇಕು ಮತ್ತು ನಾವು ಸಹಕಾರ ಮತ್ತು ಸಹಯೋಗದಿಂದ ಈ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸಬೇಕು.

## ಶಿಕ್ಷಣ ಮತ್ತು ತರಬೇತಿಯ ಸಮಸ್ಯೆ

ನವಮುಸ್ಲಿಮರಿಗೆ ಸಂಬಂಧಿಸಿದಂತೆ ನಾವು ಬಗೆಹರಿಸಲಿಕ್ಕಿರುವ ಸಮಸ್ಯೆ ಕೇವಲ ಇದೊಂದೇ ಅಲ್ಲ. ಅವರ ಅತ್ಯಂತ ದೊಡ್ಡ ಸಮಸ್ಯೆ ಶಿಕ್ಷಣ ಮತ್ತು ತರಬೇತಿಯದ್ದಾಗಿದೆ. ಈ ದೆಸೆಯಲ್ಲಿ ಯಾವುದೇ ಗಮನಾರ್ಹವೆನ್ನಬಹುದಾದ ವ್ಯವಸ್ಥೆ ಈಗಲೂ ಆಗಿಲ್ಲ. ದಕ್ಷಿಣ ಭಾರತದ ಕೆಲ ರಾಜ್ಯಗಳಲ್ಲಿ ಕೆಲ ಮುಸ್ಲಿಮ್ ಸಂಘಟನೆಗಳು ಮತ್ತು ಕೆಲ ಧರ್ಮನಿಷ್ಠ ವ್ಯಕ್ತಿಗಳ ಪ್ರಯತ್ನಗಳಿಂದಾಗಿ ಸಾಕಷ್ಟು ಮಂದಿ ಇಸ್ಲಾಮಿನ ವ್ಯಾಪ್ತಿಯೊಳಗೆ ಬಂದ ವಿಷಯ ತಿಳಿದು ನನಗೆ ಬಹಳ ಸಂತೋಷವಾಯಿತು. ಆದರೆ ಇತ್ತೀಚೆಗೆ ನಮ್ಮ ಕಾರ್ಯಕರ್ತರು ಮತ್ತು ಸ್ವತಃ ನಾನು ಆ ಪ್ರದೇಶಗಳ ಸಮೀಕ್ಷೆ ಕೈಗೊಂಡಾಗ ನಮಗೆ ಕಂಡು ಬಂದ ಪರಿಸ್ಥಿತಿ ಅತ್ಯಂತ ಕಳವಳಕಾರಿಯಾಗಿತ್ತು. ಕೆಲವು ಕಡೆಗಳಲ್ಲಿ ಜನ ವಿಶ್ವಾಸ ಸ್ವೀಕರಿಸಿದ ಬಳಿಕ ಮತ್ತೆ ಹಿಂದಕ್ಕೆ ಮರಳಿದ್ದಾರೆ. ಇಂತಹ ಘಟನೆಗಳು ಬಹಳ ಕಡಿಮೆ. ಅಲ್ಲದೆ ಇಂತಹ ಪ್ರಕರಣಗಳು ಉತ್ತರದಲ್ಲೂ ಆಗೊಮ್ಮೆ ಈಗೊಮ್ಮೆ ನಡೆಯುತ್ತವೆ. ತಾತ್ವಿಕವಾಗಿ ಮುಸ್ಲಿಮರಾಗಿದ್ದರೂ ಅವರು ಹೆಚ್ಚಿನ ಸಂದರ್ಭಗಳಲ್ಲಿ ಕೇವಲ ನಾಮಮಾತ್ರ ಮುಸ್ಲಿಮರಾಗಿರುತ್ತಾರೆ. ಅವರಿಗೆ ಇಸ್ಲಾಮಿನ ಜ್ಞಾನ ಇರುವುದಿಲ್ಲ. ಮಾತ್ರವಲ್ಲ ಅವರ ನಡತೆಯೂ ಇಸ್ಲಾಮಿನಂತಿರುವುದಿಲ್ಲ. ಎಲ್ಲಿಯವರೆಗೆಂದರೆ ಹೆಚ್ಚಿನ ನವಮುಸ್ಲಿಮರು ನಮಾಝ್ ಕೂಡಾ ನಿರ್ವಹಿಸುವುದಿಲ್ಲ. ಮುಸ್ಲಿಮೇತರ ಸಮಾಜ ಮತ್ತು ಮುಸ್ಲಿಮ್ ಸಮಾಜ ಎರಡರ ಕೆಡುಕುಗಳೂ ಅವರಲ್ಲಿವೆ. ಶೈಕ್ಷಣಿಕ ಮತ್ತು ಆರ್ಥಿಕ ಹಿಂದುಳಿಕೆಯೂ ಪ್ರಮುಖ ಸಮಸ್ಯೆಯಾಗಿದೆ. ಅವರ ಶಿಕ್ಷಣ ಮತ್ತು ತರಬೇತಿಯ ಚಿಂತೆ ಯಾರಿಗೂ ಇಲ್ಲ ಎಂಬುದು ಹೆಚ್ಚು ಕಳವಳಕಾರಿ ಅಂಶ. ಉತ್ತರದಲ್ಲಿ ಪರಿಸ್ಥಿತಿ ಭಿನ್ನವಾಗಿದ್ದರೂ ಹೆಚ್ಚೇನೂ ಭಿನ್ನವಲ್ಲ. ನಮ್ಮ ಸಮಾಜ ಎಷ್ಟು ಕೆಟ್ಟಿದೆಯೆಂದರೆ ನವ ಮುಸ್ಲಿಮರ ತರಬೇತಿ ಮತ್ತು ಶಿಕ್ಷಣಕ್ಕೆ ವಿಶೇಷ ಗಮನ ನೀಡದಿದ್ದರೆ ಮತ್ತು ಮುಸ್ಲಿಮರ ಕೆಡುಕುಗಳಿಂದ ಅವರನ್ನು ರಕ್ಷಿಸುವ ಪ್ರಜ್ಞಾಪೂರ್ವಕ ಪ್ರಯತ್ನ ನಡೆಸದೇ ಇದ್ದರೆ ಎಲ್ಲವೂ ನೀರ ಮೇಲೆ ಮಾಡಿದ ಹೋಮದಂತಾಗಬಹುದು. ಅವರು ಮುಸ್ಲಿಮರಾಗುವುದು ಮತ್ತು ಮುಸ್ಲಿಮರಾಗದೇ ಇರುವುದು ವ್ಯಾವಹಾರಿಕವಾಗಿ ಸಮಾನವಾಗಿರುವುದು.

ಸಾಮಾನ್ಯ ಶಿಕ್ಷಣ ಮತ್ತು ತರಬೇತಿಯ ಸಮಸ್ಯೆಯಲ್ಲದೆ ಸತ್ಯ ಸಂದೇಶ ಸ್ವೀಕರಿಸುವ ಯುವಕರ ಉನ್ನತ ಶಿಕ್ಷಣದ ಕುರಿತು ಮತ್ತು ನವಮುಸ್ಲಿಮರ ಮಕ್ಕಳ ಶಿಕ್ಷಣ ಮತ್ತು ತರಬೇತಿಯ ಬಗ್ಗೆಯೂ ಆಲೋಚಿಸಬೇಕಾಗಿದೆ. ಆದರೆ ಪ್ರಜ್ಞಾವಂತ ಮತ್ತು ಸ್ಥಿತಿವಂತ ಮುಸ್ಲಿಮರ ಸಹಕಾರಗಳಿಂದ ಈ ಸಮಸ್ಯೆಯೂ ಬಗೆಹರಿಯಬಹುದೆಂಬ ವಿಶ್ವಾಸ ನಮಗಿದೆ. ಆದರೆ ಆ ವಿಷಯದಲ್ಲಿ ನಾವು ವಿಶೇಷ ಆಸಕ್ತಿ ವಹಿಸುವುದು ಮತ್ತು ಸಕಾಲದಲ್ಲಿ ಪರಿಹಾರದ

ಕಡೆಗೆ ಹೋಣೆಗಾರ ವ್ಯಕ್ತಿಗಳ ಗಮನ ಸೆಳೆಯುವುದು ಹಾಗೂ ಸಹಾನುಭೂತಿ ಮತ್ತು ಸಹಮತವಿರುವ ವ್ಯಕ್ತಿಗಳ ಸಹಕಾರ ಪಡೆಯುವುದು ಅತ್ಯವಶ್ಯಕ.

ನವ ಮುಸ್ಲಿಮರ ಇನ್ನೊಂದು ದೊಡ್ಡ ಸಮಸ್ಯೆ ಅವರ ಆರ್ಥಿಕ ಸಮಸ್ಯೆಯಾಗಿದೆ. ಮುಸ್ಲಿಮರ ಸಾಮಾನ್ಯ ಅವಸ್ಥೆಯೆಂದರೆ ಅವರು ಕಲಿಮಾ ಓದಿಸಿ ಕಳಿಸಿ ಬಿಡುತ್ತಾರೆ. ಅವರ ಸ್ಥಿತಿ ಹೇಗಿದೆ ಎಂಬುದನ್ನು ಅವರು ಆನಂತರ ತಿರುಗಿಯೂ ನೋಡುವುದಿಲ್ಲ. ನಿಜವಾಗಿ ಇಸ್ಲಾಮ್ ಸ್ವೀಕರಿಸಿದ ನಂತರ ಸಾಮಾನ್ಯವಾಗಿ ಜನರ ಆರ್ಥಿಕ ಸಮಸ್ಯೆ ಹೆಚ್ಚು ಜಟಿಲಗೊಳ್ಳುತ್ತದೆ. ಪರಿಸ್ಥಿತಿ ಎಲ್ಲಿಗೆ ತಲಪುತ್ತದೆಂದರೆ ಅವರು ಅನ್ಯರ ಮುಂದೆ ಕೈಚಾಚ ಬೇಕಾಗುತ್ತದೆ. ಕೆಲವು ನವಮುಸ್ಲಿಮರು ಕೈಚಾಚುವುದನ್ನು ಅಭ್ಯಾಸವಾಗಿ ಮಾಡಿಕೊಳ್ಳುತ್ತಾರೆ. ಇಸ್ಲಾಮನ್ನು ಸಂಪಾದನೆಯ ಮಾಧ್ಯಮವಾಗಿ ಮಾರ್ಪಡಿಸುವ ಅತ್ಯಂತ ವೇದನಾಜನಕ ಮತ್ತು ಕಹಿ ವಿದ್ಯಮಾನಗಳನ್ನೂ ನಾವು ನೋಡುತ್ತೇವೆ. ಈ ಸಮಸ್ಯೆ ಅಂತಹ ಕಠಿಣ ಸಮಸ್ಯೆಯೂ ಅಲ್ಲ. ಸತ್ಯವಿಶ್ವಾಸ ಸ್ವೀಕರಿಸುವವರ ಪೋಷಣೆಯನ್ನು ತಮ್ಮ ಸೌಭಾಗ್ಯವೆಂದು ಪರಿಗಣಿಸುವ ನಿಸ್ವಾರ್ಥ ಜನರೂ ಮುಸ್ಲಿಮರಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಹಾಗಿದ್ದರೂ ಆರ್ಥಿಕ ಲಾಭ ಅಥವಾ ಯಾವುದಾದರೂ ಪ್ರಾಪಂಚಿಕ ಆಮಿಷಕ್ಕೆ ಬಲಿಯಾಗಿ ಇಸ್ಲಾಮ್ ಸ್ವೀಕರಿಸಿ ಮುಸ್ಲಿಮರನ್ನು ಮೂರ್ಖರನ್ನಾಗಿಸುವುದನ್ನು ಅವರು ಇಷ್ಟಪಡುವುದಿಲ್ಲ. ನವಮುಸ್ಲಿಮರಲ್ಲಿ ಇದ್ದುದರಲ್ಲಿ ಸಂತೃಪ್ತಿ ಪಡುವ ಗುಣ ಮೂಡಿಸುವುದು ಮತ್ತು ಅದೇ ವೇಳೆ ತಾವು ಯಾವುದೇ ಕ್ರಮ ಕೈಗೊಳ್ಳುವುದಾದರೂ ಅಲ್ಲಾಹನ ಸಂತೃಪ್ತಿಗಾಗಿ ಮತ್ತು ಪರಲೋಕದಲ್ಲಿ ಮೋಕ್ಷ ಪಡೆಯಲಿಕ್ಕಾಗಿ ಮಾಡುತ್ತಿದ್ದೇವೆ ಎಂಬ ಭಾವನೆ ಅವರಲ್ಲಿ ಮೂಡಿಸುವುದು ಬಹಳ ಅಗತ್ಯ. ವ್ಯಕ್ತಿ ಈ ಕಾರಣಕ್ಕಾಗಿ ಮಾತ್ರ ತನ್ನ ಧರ್ಮವನ್ನು ಬಿಡಬೇಕು. ಯಾವುದೇ ಒತ್ತಡ, ಭಯ, ಲಾಲಸೆ ಮತ್ತು ಯಾವುದೇ ಸಾಂಪತ್ತಿಕ ಲಾಭಕ್ಕಾಗಿ ತನ್ನ ಧರ್ಮವನ್ನು ತ್ಯಜಿಸಿ ಇನ್ನೊಂದು ಧರ್ಮವನ್ನು ಸ್ವೀಕರಿಸುವುದು ಸ್ವತಃ ತನಗೆ ಮತ್ತು ಆ ಎರಡು ಧರ್ಮಗಳಿಗೆ ಅನ್ಯಾಯ ಮಾಡುವುದಾಗಿದೆ. ಆದ್ದರಿಂದ ಅವರು ಆಮಿಷಗಳಿಗೆ ಬಲಿಯಾಗಬಾರದು. ಬೇಡುವುದು ಮಾನವತೆಯನ್ನು ಅಪಮಾನಗೊಳಿಸುವಂತಹ ಮತ್ತು ದೇವನಿಗೆ ಅತ್ಯಂತ ಅಪ್ರಿಯವಾದ ಕಾರ್ಯವಾಗಿದೆ ಎಂಬುದನ್ನು ಅವರಿಗೆ ಹೇಳ ಬೇಕಾಗಿದೆ. ಸತ್ಯ ಮಾರ್ಗದಲ್ಲಿ ಅನೇಕ ಸಂಕಷ್ಟಗಳು ಮತ್ತು ಪರೀಕ್ಷೆಗಳು ಎದುರಾಗುತ್ತವೆ. ಅವುಗಳನ್ನು ಸಹನೆ ಮತ್ತು ದೃಢತೆಯೊಂದಿಗೆ ಎದುರಿಸಬೇಕು ಮತ್ತು ದೇವೇತರರ ಮುಂದೆ ಕೈಚಾಚಬಾರದು ಎಂಬುದನ್ನು ಅವರಿಗೆ ತಿಳಿ ಹೇಳಬೇಕಾಗಿದೆ. ಇದು ಅವರಿಗೆ ಹೇಳಬೇಕಾದ ವಿಷಯಗಳು. ಮತ್ತೊಂದೆಡೆ ಅವರು ಇತರರ ಮುಂದೆ ಕೈಚಾಚುವುದು ಅನಿವಾರ್ಯವಾಗದ ಹಾಗೆ ಮತ್ತು ತಮ್ಮ ಸ್ವಾಭಿಮಾನ ಮತ್ತು ಸ್ವಂತಿಕೆಯನ್ನು ಕಳಕೊಳ್ಳುವ ಪರಿಸ್ಥಿತಿ ಎದುರಾಗದ ಹಾಗೆ, ತಮ್ಮ ಕಾಲ ಮೇಲೆ ನಿಂತು ಗೌರವದಿಂದ ಸಂಪಾದನೆ ನಡೆಸಲು ಸಾಧ್ಯವಾಗುವಂತೆ ಅವರ ಆರ್ಥಿಕ ಸಮಸ್ಯೆಗಳನ್ನು ಶೀಘ್ರದಲ್ಲಿ ಬಗೆಹರಿಸಲು ಸ್ಥಿತಿವಂತ ಮುಸ್ಲಿಮರ ಸಹಕಾರದೊಂದಿಗೆ ನಾವು ಪ್ರಯತ್ನಿಸಬೇಕಾಗಿದೆ.

## ಸಾಮಾಜಿಕ ಸಮಸ್ಯೆ

ನವಮುಸ್ಲಿಮರ ಸಾಮಾಜಿಕ ಸಮಸ್ಯೆ ಅವರ ಇನ್ನೊಂದು ಸಮಸ್ಯೆಯಾಗಿದೆ. ಹಲವೊಮ್ಮೆ ಇಸ್ಲಾಮ್ ಸ್ವೀಕರಿಸಿದ ನಂತರ ಅವರಿಗೆ ತಮ್ಮ ಸ್ವಂತ ಊರು ವಿವಶತೆ ಹುಟ್ಟಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಹೀಗಾಗದಿದ್ದರೂ ಅವರ ಶಿಕ್ಷಣ ಮತ್ತು ತರಬೇತಿಯ ದೃಷ್ಟಿಯಿಂದ ಅವರು ಇಸ್ಲಾಮೇತರ ವಾತಾವರಣವನ್ನು ತ್ಯಜಿಸಿ ಇಸ್ಲಾಮೀ ವಾತಾವರಣಕ್ಕೆ ಬರುವುದು ಅನಿವಾರ್ಯವಾಗುತ್ತದೆ. ಇಸ್ಲಾಮಿನಲ್ಲಿ ಹಿಜ್ರತ್‌ಗೆ ಈ ದೃಷ್ಟಿಯಿಂದಲೂ ಮಹತ್ವವಿದೆ.

ಸತ್ಯವಿಶ್ವಾಸ ಸ್ವೀಕರಿಸಿದ ನನ್ನ ದಾಸರೇ, ನನ್ನ ಭೂಮಿ ವಿಶಾಲವಾಗಿದೆ. ಆದ್ದರಿಂದ ನೀವು ನನ್ನನ್ನು ಮಾತ್ರ ಆರಾಧಿಸಿರಿ (ಅಲ್ ಅಂಕಬೂತ್)

ಅರ್ಥಾತ್ ಒಂದು ವೇಳೆ ನಿಮ್ಮ ಊರು ನನ್ನ ದಾಸ್ಯ-ಆರಾಧನೆ ನಡೆಸಲು ನಿಮಗೆ ಇಕ್ಕಟ್ಟಾಗಿ ಮಾರ್ಪಟ್ಟಿದ್ದರೆ ನೀವು ನಿಮ್ಮ ಊರಿಗೇ ಅಂಟಿಕೊಳ್ಳುವ ಬದಲು ದೇವನ ವಿಶಾಲ ಭೂಮಿಯ ಬೇರಾವುದಾದರೂ ಕಡೆಗೆ ಹೊರಟು ಬಿಡಿ ಮತ್ತು ಎಲ್ಲಿ ಏಕೈಕ ದೇವನ ಆರಾಧನೆಗೆ ಸೌಕರ್ಯಗಳಿವೆಯೋ ಅಲ್ಲಿ ನೆಲೆ ನಿಂತು ಜೀವನವನ್ನು ಅಲ್ಲಾಹನ ಸಂಪ್ರೀತಿ ಮತ್ತು ಆರಾಧನೆಗೆ ಮುಡಿಪಾಗಿಡಿರಿ ಎಂಬುದು ಇದರ ಇಂಗಿತ.

ಈ ಸಮಸ್ಯೆಯೂ ಬಹಳ ಮುಖ್ಯವಾದುದು ಮತ್ತು ಕೆಲವೊಮ್ಮೆ ಜಟಿಲ ರೂಪವನ್ನೂ ಪಡೆಯುತ್ತದೆ. ಆದರೆ ಇದೇನೂ ಅಪರಿಹಾರ್ಯ ಸಮಸ್ಯೆಯಲ್ಲ. ಸಂವೇದನಾಶೀಲ ಮುಸ್ಲಿಮರ ಸಹಕಾರದಿಂದ ಈ ಸಮಸ್ಯೆಯನ್ನು ಬಹಳ ಒಳ್ಳೆಯ ರೀತಿಯಲ್ಲಿ ಬಗೆಹರಿಸಬಹುದಾಗಿದೆ.

## ವಂಚನೆ ಮತ್ತು ಚಾರಿತ್ರ್ಯಹೀನತೆ

ಕೆಲವರು ನವಮುಸ್ಲಿಮರ ರೂಪಧರಿಸಿ ಮುಸ್ಲಿಮರಿಗೆ ಮೋಸ ಮಾಡುತ್ತಾರೆ ಮತ್ತು ಅವರನ್ನು ಮೂರ್ಖರನ್ನಾಗಿಸುತ್ತಾರೆ. ಆ ವ್ಯಕ್ತಿಗಳು ಮುಸ್ಲಿಮರ ನಿರೀಕ್ಷೆಗೆ ಅನುಗುಣವಾದ ವರ್ತನೆ ಹೊಂದಿರುವುದಿಲ್ಲ ಎಂಬುದು ನವಮುಸ್ಲಿಮರಿಗೆ ಸಂಬಂಧಿಸಿದಂತೆ ಎದುರಾಗುವಂತಹ ಒಂದು ಪ್ರಮುಖ ಸಮಸ್ಯೆ. ಉದಾಹರಣೆಗೆ ಕೆಲವರು ನವಮುಸ್ಲಿಮರ ರೂಪ ತೊಟ್ಟು ಜನರಿಂದ ಆರ್ಥಿಕ ಲಾಭ ಪಡೆಯುತ್ತಾರೆ ಮತ್ತು ಹೇರಳ ಹಣವನ್ನು ಪಡಕೊಂಡು ಮೋಸ ಮಾಡಿ ಹೊರಟು ಹೋಗುತ್ತಾರೆ. ನವಮುಸ್ಲಿಮರ ಸೋಗು ಹಾಕಿ ಮುಸ್ಲಿಮರನ್ನು ವಂಚಿಸುತ್ತಾ ತಿರುಗುವವರೂ ಇದರಲ್ಲಿದ್ದಾರೆ. ಅದೇ ರೀತಿ ಆರ್ಥಿಕ ಲಾಭಕ್ಕಾಗಿ ಇಸ್ಲಾಮ್ ಸ್ವೀಕರಿಸಿ ಅನಂತರ ಧರ್ಮ ಸಮ್ಮತ ಮತ್ತು ನಿಷಿದ್ಧ ಮಾರ್ಗಗಳೆರಡರಿಂದಲೂ ಆರ್ಥಿಕ ಲಾಭ ಸಂಪಾದಿಸುವುದರಲ್ಲಿ ತೊಡಗುವ ಜನರೂ ಇದ್ದಾರೆ. ಅಂತೆಯೇ ಇಸ್ಲಾಮನ್ನು ಬಹಳ ಪ್ರಾಮಾಣಿಕ ಉದ್ದೇಶದಿಂದ ಸ್ವೀಕರಿಸಿ ಆ ಬಳಿಕ ಮುಸ್ಲಿಮರ ಕೆಟ್ಟ ನಡತೆ ಮತ್ತು ಕಪಟ ಸದ್ವರ್ತನೆ ಹಾಗೂ ಒಳಿತಿನಿಂದ ರೋಸಿ ಹೋಗಿ ಜನರಿಂದ ಸಹಾಯ ಯಾಚಿಸಲು ಮುಂದಾಗುವವರೂ ಇದ್ದಾರೆ. ಕೆಲವರಂತೂ ನವಮುಸ್ಲಿಮರಾಗಿ ಮುಸ್ಲಿಮರ ಮಧ್ಯೆ ನುಸುಳುತ್ತಾರೆ

ಮತ್ತು ಅವರ ಆಂತರಿಕ ವಿಷಯಗಳೆಲ್ಲವನ್ನೂ ಸಂಗ್ರಹಿಸುವ ಬೇಹುಗಾರಿಕಾ ಉದ್ದೇಶ ಹೊಂದಿರುತ್ತಾರೆ. ಕೆಲವರು ಯಾವುದೋ ಉದ್ದೇಶ ಇಟ್ಟು ಕೊಂಡು ವಿಶ್ವಾಸ ಸ್ವೀಕರಿಸುತ್ತಾರೆ ಮತ್ತು ಆ ಉದ್ದೇಶ ಪೂರ್ತಿಯಾದೊಡನೆ ಅಥವಾ ಪೂರ್ತಿಯಾಗುವುದಿಲ್ಲ ಎಂದು ಖಚಿತವಾದೊಡನೆ ಮರಳಿ ಹೋಗುತ್ತಾರೆ. ಕೆಲವರು ಮುಸ್ಲಿಮ್ ಹುಡುಗಿಯರನ್ನು ಮದುವೆಯಾಗಿ ಯಾವುದೇ ಸಮರ್ಥನೀಯ ಕಾರಣವಿಲ್ಲದೆ ಅವರನ್ನು ಸತಾಯಿಸಿ ಅವರಿಗೆ ತಲಾಕ್ ಕೊಟ್ಟು ಬಿಡುತ್ತಾರೆ. ಕೆಲವರು ಅದಕ್ಕಿಂತಲೂ ಹೆಚ್ಚಿನ ಕಿರುಕುಳವನ್ನು ಕೊಡುತ್ತಾರೆ. ಸ್ವತಃ ಮುರ್ತದ್ (ಧರ್ಮಭ್ರಷ್ಟ) ಆಗಿ ಬಿಟ್ಟು ತಮ್ಮ ಜತೆಗೆ ಮುಸ್ಲಿಮ್ ಹೆಣ್ಮಕ್ಕಳನ್ನೂ ಕೊಂಡೊಯ್ಯುತ್ತಾರೆ ಅಥವಾ ಕೊಂಡು ಹೋಗಲು ತೀವ್ರವಾಗಿ ಶ್ರಮಿಸುತ್ತಾರೆ. ತನ್ಮೂಲಕ ಮುಸ್ಲಿಮರಿಗೆ ದೊಡ್ಡ ತಲೆಬೇನೆಯಾಗಿ ಮಾರ್ಪಡುತ್ತಾರೆ. ಕೆಲವರು ಇದೆಲ್ಲವನ್ನೂ ಮಾಡುವುದಿಲ್ಲ. ಆದರೆ ಅವರ ಚಾರಿತ್ರ್ಯ ಒಬ್ಬ ನೈಜ ಮುಸ್ಲಿಮನಂತಿರುವುದಿಲ್ಲ. ಇದೆಲ್ಲವನ್ನೂ ನೋಡಿ ಸಾಮಾನ್ಯ ಮುಸ್ಲಿಮರು ಮತ್ತು ಕೆಲ ಸಂದರ್ಭಗಳಲ್ಲಿ ನಮ್ಮ ಕಾರ್ಯಕರ್ತರು ಕೂಡಾ ನಿರಾಶರಾಗುತ್ತಾರೆ. ಪರಿಣಾಮವಾಗಿ ಅವರು ನೈಜ ನವಮುಸ್ಲಿಮರ ಸಮಸ್ಯೆಗಳ ಬಗ್ಗೆಯೂ ಆಸಕ್ತಿ ತೋರುವುದಿಲ್ಲ. ಕೆಲವರು ಎಲ್ಲಿಯವರೆಗೆ ಮುಂದುವರಿಯುತ್ತಾರೆಂದರೆ ಮುಸ್ಲಿಮೇತರರಿಗೆ ಸತ್ಯಸಂದೇಶ ತಲಪಿಸುವ ಕೆಲಸ ನಿಷ್ಪ್ರಯೋಜಕ ಎಂದು ಭಾವಿಸತೊಡಗುತ್ತಾರೆ. ಮುಸ್ಲಿಮೇತರರ ಪೈಕಿ ಇಸ್ಲಾಮಿನ ಕಡೆಗೆ ಬರುವವರೆಲ್ಲರೂ ಇದೇ ರೀತಿಯವರಾಗಿರಬಹುದು ಮತ್ತು ಇಂತಹ ನಡತೆಯನ್ನೇ ಪ್ರದರ್ಶಿಸಬಹುದು ಎಂದು ಅವರು ಭಾವಿಸುತ್ತಾರೆ. ಆದ್ದರಿಂದ ಯಾಕೆ ಈ ಎಲ್ಲ ಸಂಕಷ್ಟವನ್ನು ಬೇಕೆಂತಲೇ ಎತ್ತಬೇಕು ಮತ್ತು ಎಲ್ಲಿಯ ವರೆಗೆ ಈ ರೀತಿ ಮೋಸ ಹೋಗುತ್ತಿರಬೇಕು ಎಂಬ ಪ್ರಶ್ನೆ ಅವರ ಮನವನ್ನು ಕಾಡುತ್ತಿರುತ್ತದೆ.

ಇಂತಹ ಪರಿಸ್ಥಿತಿಗಳು ನಮ್ಮ ಕಾರ್ಯಕರ್ತರಿಗೆ ಆಗಾಗ ಎದುರಾಗಿವೆ. ಆದರೆ ಮುಸ್ಲಿಮೇತರರಿಗೆ ಸತ್ಯ ಸಂದೇಶ ತಲಪಿಸುವ ಕೆಲಸವನ್ನು ಯಾವ ಪರಿಸ್ಥಿತಿಯಲ್ಲೇ ಆದರೂ ನಡೆಸುತ್ತಲೇ ಇರಬೇಕು ಎಂಬುದು ನಮ್ಮ ಖಚಿತ ತೀರ್ಮಾನ. ಇದಂತೂ ಅಲ್ಲಾಹನು ನಿಶ್ಚಯಿಸಿರುವ ಹೊಣೆಗಾರಿಕೆಯಾಗಿದ್ದು ನಮ್ಮ ಜೀವನದ ಪರಮ ಉದ್ದೇಶವಾಗಿದೆ. ಈ ಮಾರ್ಗದಲ್ಲಿ ಯಾವುದೇ ಸಂಕಷ್ಟ ಎದುರಾದರೂ ಯಾವುದೇ ಆಪತ್ತುಗಳನ್ನು ಎದುರಿಸಬೇಕಾಗಿ ಬಂದರೂ ಯಾವ ಬೆಲೆ ತೆತ್ತಾದರೂ ಈ ಕೆಲಸವನ್ನು ಅವರು ಮಾಡುತ್ತಲೇ ಇರಬೇಕು ಮತ್ತು ಒಂದು ಕ್ಷಣಕ್ಕೂ ಅದನ್ನು ಬಿಡಬಾರದು. ಹಾಗೆ ಮಾಡುವ ಅಧಿಕಾರವೂ ನಮಗಿಲ್ಲ. ಸಂಕಷ್ಟಗಳನ್ನು ಎದುರಿಸದೆ, ತ್ಯಾಗಗಳನ್ನು ನೀಡದೆ ಯಾವ ಶ್ರೇಷ್ಠ ಕೆಲಸವಾದರೂ ಸಾಧಿಸಲು ಸಾಧ್ಯವೇ?

ಇದು ಇಂದು ಪ್ರಥಮವಾಗಿ ಎದುರಾಗುತ್ತಿರುವಂತಹ ಪರಿಸ್ಥಿತಿಯೇನೂ ಅಲ್ಲ. ಪ್ರವಾದಿಯ ಕಾಲದಲ್ಲಿ ಇದೆಲ್ಲವೂ ನಡೆದಿತ್ತು. ಮದೀನಾ ಕಾಲದಲ್ಲಿ ಮುನಾಫಿಕರು ಬಹುದೊಡ್ಡ ಸಂಖ್ಯೆಯಲ್ಲಿದ್ದರು. ಅದು ಸತ್ಯವಿಶ್ವಾಸಿ ಸಮುದಾಯಕ್ಕೆ ಮತ್ತು ಸ್ವತಃ

ಪ್ರವಾದಿವರ್ಯರಿಗೆ(ಸ) ಒಂದು ದೊಡ್ಡ ಸಮಸ್ಯೆಯಾಗಿ ಮಾರ್ಪಟ್ಟಿತ್ತು. ಇವರು ಸತ್ಯನಿಷೇಧಿಗಳೊಂದಿಗೆ ಸೇರಿ ಸಂಚು ಹೂಡುತ್ತಿದ್ದರು. ಮುಸ್ಲಿಮರ ಮತ್ತು ಇಸ್ಲಾಮಿನ ವಿನಾಶಕ್ಕಾಗಿ ಯೋಜನೆಗಳನ್ನು ರೂಪಿಸುತ್ತಿದ್ದರು. ಪ್ರವಾದಿವರ್ಯರು ಮತ್ತು ಸತ್ಯವಿಶ್ವಾಸಿಗಳ ಪರಿಹಾಸ್ಯ ಮಾಡುತ್ತಿದ್ದರು. ಅವರನ್ನು ವಂಚಿಸುತ್ತಿದ್ದರು. ಅವರಿಗೆ ನಾನಾ ವಿಧದ ತೊಂದರೆಗಳನ್ನು ನೀಡುತ್ತಿದ್ದರು. ಸುಳ್ಳಾರೋಪಗಳನ್ನು ಹೊರಿಸುತ್ತಿದ್ದರು ಮತ್ತು ದಿನರಾತ್ರಿ ಸುಳ್ಳು ಪ್ರಚಾರಗಳನ್ನು ನಡೆಸುತ್ತಿದ್ದರು. ಅಲ್ಲದೆ, ಸತ್ಯವಿಶ್ವಾಸಿಗಳನ್ನು ಪ್ರವಾದಿವರ್ಯರಿಗೆ(ಸ) ಅವಿಧೇಯತೆ ತೋರಲು ಮತ್ತು ಬಂಡೇಳಲು ಪ್ರೋತ್ಸಾಹಿಸುತ್ತಿದ್ದರು. ಸೂಕ್ಷ್ಮ ಸಂದರ್ಭಗಳಲ್ಲಿ, ಸತ್ಯವಿಶ್ವಾಸಿಗಳು ಅಪಾಯಗಳಿಂದ ಸುತ್ತುವರಿಯಲ್ಪಟ್ಟಿರುವಾಗ ಮೋಸ ಮಾಡಿ ಪಲಾಯನದ ಹಾದಿ ಹಿಡಿಯುತ್ತಿದ್ದರು ಮತ್ತು ನಿಸ್ಪೃಹ ಸತ್ಯವಿಶ್ವಾಸಿಗಳನ್ನು 'ಸುಫಹಾ' (ತಿಳಿಗೇಡಿಗಳು) ಮತ್ತು 'ಮುಫ್ಸಿದ್' (ಗಲಭೆಕೋರರು) ಎಂದು ಕರೆಯುತ್ತಿದ್ದರು. ಪವಿತ್ರ ಕುರ್‌ಆನ್‌ನಲ್ಲಿ ಅವರನ್ನು ಈ ರೀತಿ ಉಲ್ಲೇಖಿಸಲಾಗಿದೆ-

"ಮನುಷ್ಯರಲ್ಲಿ ಕೆಲವರು, ನಾವು ಅಲ್ಲಾಹನಲ್ಲಿ ಹಾಗೂ ಅಂತಿಮ ದಿವಸದಲ್ಲಿ ವಿಶ್ವಾಸವಿಟ್ಟಿದ್ದೇವೆ ಎಂದು ಹೇಳುವವರೂ ಇದ್ದಾರೆ. ಆದರೆ ನಿಜವಾಗಿ ಅವರು ವಿಶ್ವಾಸಿಗಳಲ್ಲ. ಅವರು ಅಲ್ಲಾಹನನ್ನೂ ವಿಶ್ವಾಸಿಗಳನ್ನೂ ವಂಚಿಸುತ್ತಾರೆ. ವಾಸ್ತವದಲ್ಲಿ ಅವರು ತಮ್ಮನ್ನು ತಾವೇ ವಂಚಿಸಿಕೊಳ್ಳುತ್ತಿದ್ದಾರೆ ಮತ್ತು ಅವರಿಗೆ ಅದರ ಬೋಧವಿರುವುದಿಲ್ಲ. ಅವರ ಹೃದಯಗಳಲ್ಲಿ ಒಂದು ರೋಗವಿದೆ. ಅದನ್ನು ಅಲ್ಲಾಹನು ಇನ್ನಷ್ಟು ಉಲ್ಬಣಗೊಳಿಸಿದನು. ಅವರು ಹೇಳುತ್ತಿರುವ ಸುಳ್ಳಿನ ಪ್ರತಿಫಲವಾಗಿ ಅವರಿಗೆ ವೇದನಾಯುಕ್ತ ಶಿಕ್ಷೆ ಕಾದಿದೆ. ಭೂಮಿಯ ಮೇಲೆ ಕ್ಷೋಭೆಯನ್ನುಂಟು ಮಾಡದಿರಿ ಎಂದು ಅವರೊಡನೆ ಹೇಳಿದಾಗಲೆಲ್ಲ ಅವರು' ನಾವು ಸುಧಾರಕರು ಮಾತ್ರ 'ಎಂದು ಹೇಳುತ್ತಾರೆ. ಜಾಗ್ರತೆ! ವಾಸ್ತವದಲ್ಲಿ ಅವರೇ ಗೊಂದಲಕಾರಿಗಳು. ಆದರೆ ಅವರಿಗೆ ಅದರ ಬೋಧವಿರುವುದಿಲ್ಲ. "ಇತರರು ವಿಶ್ವಾಸವಿಟ್ಟಂತೆಯೇ ನೀವು ವಿಶ್ವಾಸವಿಡಿರಿ " ಎಂದು ಅವರೊಡನೆ ಹೇಳಲಾದಾಗ, "ಮೂರ್ಖರ ಹಾಗೆ ನಾವೂ ವಿಶ್ವಾಸವಿಡಬೇಕೇ " ಎಂದು ಅವರು ಹೇಳುತ್ತಾರೆ. ಎಚ್ಚರಿಕೆ! ನಿಜವಾಗಿ ಅವರೇ ಸ್ವತಃ ಮೂರ್ಖರಾಗಿದ್ದಾರೆ ಎಂಬುದನ್ನು ಅವರು ಅರಿತಿಲ್ಲ. ಇವರು ವಿಶ್ವಾಸಿಗಳನ್ನು ಕಂಡಾಗ, "ನಾವು ವಿಶ್ವಾಸವಿಟ್ಟಿದ್ದೇವೆ " ಎನ್ನುತ್ತಾರೆ. ಅತ್ತ ತಮ್ಮ ಶೈತಾನರನ್ನು ಸಂಧಿಸಿದಾಗ ಅವರೊಡನೆ, "ನಿಜವಾಗಿ ನಾವು ನಿಮ್ಮ ಜೊತೆಯಲ್ಲೇ ಇದ್ದೇವೆ. ನಾವು ವಿಶ್ವಾಸವಿಡುವವರನ್ನು ಕೇವಲ ಅಪಹಾಸ್ಯ ಮಾಡುತ್ತಿದ್ದೇವೆ" ಎನ್ನುತ್ತಾರೆ. ಅಲ್ಲಾಹನು ಇವರನ್ನು ಅಪಹಾಸ್ಯ ಮಾಡುತ್ತಿದ್ದಾನೆ. ಇವರು ಈ ದ್ರೋಹದಲ್ಲಿ ಕುರುಡರಂತೆ ಅಲೆದಾಡುತ್ತಿರಲು ಇನ್ನಷ್ಟು ದೀರ್ಘ ಅವಕಾಶವನ್ನು ನೀಡುತ್ತಿದ್ದಾನೆ. ಇವರು ಸನ್ಮಾರ್ಗಕ್ಕೆ ಬದಲಾಗಿ ದುರ್ಮಾರ್ಗವನ್ನು ಖರೀದಿಸಿಕೊಂಡವರಾಗಿದ್ದಾರೆ. ಆದರೆ ಈ ವ್ಯಾಪಾರ ಇವರಿಗೆ ಲಾಭದಾಯಕವಾದುದಲ್ಲ ಮತ್ತು ಇವರು ಸನ್ಮಾರ್ಗ ಸಿದ್ಧಿಸಿದವರು ಅಲ್ಲವೇ ಅಲ್ಲ." (ಅಲ್ ಬಕರಃ, 8 ರಿಂದ 16)

ಸೂರಃ ಬಕರಃದಲ್ಲಿ ಮಾತ್ರವಲ್ಲ, ಸೂರಃ ಆಲಿ ಇಮ್ರಾನ್, ಸೂರಃ ಅನ್ನಿಸಾ, ಸೂರಃ ಅತ್ತೌಬ, ಸೂರಃ ಮುನಾಫಿಕೂನ್ ಮತ್ತು ಇತರ ಅನೇಕ ಅಧ್ಯಾಯಗಳಲ್ಲಿ ಮುನಾಫಿಕೀನ್‌ಗಳ ದುರ್ನಡತೆ, ಅಲ್ಲಾಹ್ ಮತ್ತು ರಸೂಲರ ಅವಿಧೇಯತೆ ಹಾಗೂ ಮುಸ್ಲಿಮರ ವಿರುದ್ಧ ಅವರು ನಡೆಸಿದ ಷಡ್ಯಂತ್ರ ಮತ್ತು ನೀಡಿದ ಸಂಕಷ್ಟಗಳ ಬಗ್ಗೆ ವಿವರವಾದ ಉಲ್ಲೇಖವಿದೆ. ಎಲ್ಲಿಯವರೆಗೆಂದರೆ ಅಲ್ಲಾಹನು ಅವರ ಬಗ್ಗೆ ಈ ಬಹಿರಂಗ ಘೋಷಣೆಯನ್ನು ಹೊರಡಿಸಿದ್ದಾನೆ. "ಕಪಟ ವಿಶ್ವಾಸಿಗಳು ನರಕದ ಅತ್ಯಂತ ತಳಭಾಗಕ್ಕೆ ಹೋಗುವರೆಂಬುದನ್ನು ಖಾತ್ರಿಯಾಗಿ ತಿಳಿದುಕೊಳ್ಳಿರಿ." (ಅನ್ನಿಸಾ:145)

ಈ ಮುನಾಫಿಕರು ಯಾರಾಗಿದ್ದರು? ಧರ್ಮವನ್ನು ಪಾಲಿಸದ ನವಮುಸ್ಲಿಮರೇ ತಾನೇ? ಆದರೆ ಇವರ ದುರ್ನಡತೆಯ ಪರಿಣಾಮವಾಗಿ ಅಲ್ಲಾಹನ ಸಂದೇಶವಾಹಕರಾಗಲೀ ಅವರ ಸಂಗಾತಿಗಳಾಗಲೀ ಮುಸ್ಲಿಮೇತರರಲ್ಲಿ ಸತ್ಯಸಂದೇಶ ಪ್ರಚಾರ ಮಾಡುವ ಕೆಲಸವನ್ನು ಒಂದು ನಿಮಿಷದ ಮಟ್ಟಿಗಾದರೂ ನಿಲ್ಲಿಸಿದ ನಿದರ್ಶನವಿದೆಯೇ? ಅವರು ನವ ಮುಸ್ಲಿಮರ ಸಮಸ್ಯೆಗಳಿಂದ ತಮ್ಮ ಕಣ್ಣನ್ನು ಬೇರೆಡೆಗೆ ತಿರುಗಿಸಿದ್ದರೇ? ಹೀಗೆ ಖಂಡಿತವಾಗಿಯೂ ಸಂಭವಿಸಲಿಲ್ಲ. ಇಲ್ಲದಿದ್ದರೆ ಮುಸ್ಲಿಮರ ಪ್ರಮಾಣ ಸಾವಿರ- ಎರಡು ಸಾವಿರಕ್ಕಿಂತ ಖಂಡಿತವಾಗಿಯೂ ಹೆಚ್ಚಾಗುತ್ತಿರಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಾಹನ ಸಂದೇಶವಾಹಕರು ಮತ್ತು ಅವರ ಗೌರವಾರ್ಹ ಸಂಗಾತಿಗಳು ಯುಕ್ತಿ ಮತ್ತು ಜಾಣ್ಮೆಯೊಂದಿಗೆ ಅವರ ಎಲ್ಲ ಪ್ರಯತ್ನಗಳನ್ನೂ ಷಡ್ಯಂತ್ರಗಳನ್ನೂ ಸೋಲಿಸಿಬಿಟ್ಟರು. ಅತ್ಯಂತ ಪ್ರೀತಿ, ಯುಕ್ತಿ ಮತ್ತು ಸದುಪದೇಶದಿಂದ ಅವರನ್ನು ಸುಧಾರಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಎಲ್ಲಿಯವರೆಗೆಂದರೆ ಅವರಲ್ಲಿ ಹೆಚ್ಚಿನವರು ಪ್ರಾಮಾಣಿಕ ಮುಸ್ಲಿಮರಾಗಿ ಮಾರ್ಪಟ್ಟರು ಮತ್ತು ಧರ್ಮದ ಅತ್ಯುತ್ತಮ ಸೇವಕರಾದರು. ಇಂದು ನಾವು ಕೂಡಾ ಇದೇ ಮಾದರಿಯನ್ನು ಅನುಸರಿಸುವ ಅಗತ್ಯವಿದೆ.

ವಾಸ್ತವವೆಂದರೆ, ಯಾವಾಗ ಇಸ್ಲಾಮೀ ಸಂದೇಶ ಪ್ರಚಾರದ ಕಾರ್ಯ ನಡೆಯುತ್ತದೋ ಆಗ ಎಲ್ಲ ರೀತಿಯ ಜನರೂ ಮುಂದೆ ಬಂದೇ ಬರುತ್ತಾರೆ. ನಮ್ಮ ಎಲ್ಲಾ ಮುಂಜಾಗ್ರತಾ ಕ್ರಮಗಳ ಹೊರತಾಗಿಯೂ ದುರ್ಬಲ ಚಾರಿತ್ರ್ಯದವರು ಕೂಡಾ ಇಸ್ಲಾಮಿನ ಆವರಣದ ಒಳಗೆ ನುಸುಳಿ ಬರುತ್ತಾರೆ. ಅವರು ತಮ್ಮ ಹಳೆಯ ದೌರ್ಬಲ್ಯಗಳಲ್ಲದೆ ಧರ್ಮವನ್ನು ಪಾಲಿಸದ ಮುಸ್ಲಿಮರ ದೌರ್ಬಲ್ಯಗಳನ್ನೂ ತಮ್ಮದಾಗಿಸಿಕೊಳ್ಳುತ್ತಾರೆ. ಕೆಲ ಸ್ವಾರ್ಥ ಹಿತಾಸಕ್ತರು ಮತ್ತು ಷಡ್ಯಂತ್ರಕಾರರು ಕೂಡಾ ಸತ್ಯದ ವಾಹಕರ ಪಂಕ್ತಿಗಳಲ್ಲಿ ನುಸುಳಿ ಬಿಡಬಹುದು. ಯುಕ್ತಿ, ಯೋಜನೆ ಮತ್ತು ದೇವ ಸಹಾಯದಿಂದ ಮಾತ್ರ ನಾವು ಆ ಸ್ವಾರ್ಥಹಿತಾಸಕ್ತರಿಗೆ ಮದ್ದರೆಯಲು ಮತ್ತು ಸಂಚುಕೋರರ ಪ್ರಯತ್ನಗಳನ್ನು ಸೋಲಿಸಲು ಸಾಧ್ಯವಾದೀತು. ಆದರೆ ಕೆಲ ವ್ಯಕ್ತಿಗಳ ಅಕೃತ್ಯಗಳಿಗಾಗಿ ಮುಸ್ಲಿಮೇತರರಲ್ಲಿ ಸಂದೇಶ ಪ್ರಚಾರ ನಡೆಸುವುದನ್ನು ನಿಲ್ಲಿಸುವುದು ಸರಿಯಾಗದು. ಅದೇ ವೇಳೆ ನವ ಮುಸ್ಲಿಮರ ಸಮಸ್ಯೆಗಳನ್ನು ನಿರ್ಲಕ್ಷಿಸುವುದು

ಕೂಡಾ ಸಮರ್ಥನೀಯವಲ್ಲ. ಇಂದು ಅಸ್ತಿತ್ವದಲ್ಲಿರುವ ಮುಸ್ಲಿಮ್ ಸಮಾಜದಲ್ಲೇ ನವಮುಸ್ಲಿಮರು ಜೀವಿಸಬೇಕಾಗಿರುವುದರಿಂದ ಅದರ ಪ್ರಭಾವಗಳನ್ನು ನಿರಂತರವಾಗಿ ಸ್ವೀಕರಿಸುತ್ತಿರುತ್ತಾರೆ ಎಂಬ ಕಹಿ ಮತ್ತು ಸ್ಪಷ್ಟ ಸತ್ಯವನ್ನೂ ನಾವು ಕಡೆಗಣಿಸಬಾರದು. ಮುಸ್ಲಿಮ್ ಸಮಾಜ ಸಮಗ್ರವಾಗಿ ಎಷ್ಟು ಕೆಟ್ಟಿದೆಯೆಂದರೆ ಯಾವನಾದರೂ ನವ ಮುಸ್ಲಿಮ್ ಕೆಟ್ಟ ಚಾರಿತ್ರ್ಯವನ್ನು ಪ್ರದರ್ಶಿಸಿದರೆ ನಾವು ಆತನ ಮೇಲೆ ಅಪವಾದ ಹೇರುವ ಬದಲು ಸ್ವತಃ ನಮ್ಮ ಅಂಗಣವನ್ನೊಮ್ಮೆ ಇಣುಕಿ ನೋಡುವ ಅಗತ್ಯವಿದೆ. ಮಾತ್ರವಲ್ಲ ಸ್ವತಃ ನಮ್ಮನ್ನು ಮತ್ತು ನಮ್ಮ ಸಮಾಜವನ್ನು ಆರೋಪಿಯಾಗಿ ನಿಲ್ಲಿಸಬೇಕಾಗಿದೆ. ಅದೇ ವೇಳೆ ಸ್ವತಃ ಇಸ್ಲಾಮೀ ಆಂದೋಲನ ಮತ್ತು ಧರ್ಮ ಸಂಸ್ಥಾಪನೆಯ ಪ್ರಯತ್ನಗಳ ಬಗ್ಗೆ ಸಮುದಾಯದ ಹೆಚ್ಚಿನ ದೊಡ್ಡ ಮತ್ತು ಸಣ್ಣ ವ್ಯಕ್ತಿಗಳ ನಿಲುವು ಹೇಗಿದೆ ಎಂಬುದನ್ನೊಮ್ಮೆ ಪರಿಶೀಲಿಸಿ. ಎಂತೆಂತಹ ಹದೀಸ್ ವಿದ್ವಾಂಸರು, ತರೀಕತ್ ಪಂಡಿತರು, ಧಾರ್ಮಿಕ ಮುಫ್ತಿಗಳು, ಜ್ಞಾನ ಮತ್ತು ಲೇಖನಿಯ ಸಾಮರ್ಥ್ಯವುಳ್ಳ ಪ್ರಚಂಡರು ತಕ್ವಾ ಮತ್ತು ತಕದ್ದುಸ್‌ನ ಸಂಪೂರ್ಣ ಬಲದೊಂದಿಗೆ ಈ ಆಂದೋಲನವನ್ನು ವಿಫಲಗೊಳಿಸಲು ರಂಗಕ್ಕೆ ಇಳಿದಿದ್ದಾರೆ ಎಂಬುದನ್ನು ಒಮ್ಮೆ ಗಮನಿಸಿ. ಇದು ಇವತ್ತಿನ ಪರಿಸ್ಥಿತಿ ಮಾತ್ರವಲ್ಲ, ಆಂದೋಲನದ ಆರಂಭದಿಂದಲೂ ಇದು ನಡೆಯುತ್ತಿದೆ. ಇದು ಸಮಕಾಲೀನ ಯುಗದ ವೈಶಿಷ್ಟ್ಯವೇನೂ ಅಲ್ಲ. ಯಾವಾಗಲೆಲ್ಲಾ ಸಮುದಾಯದ ಸುಧಾರಣೆಗಾಗಿ ಯಾವನಾದರೂ ಸುಧಾರಕ ಅಥವಾ 'ಮುಜದ್ದಿದ್' ಎದ್ದು ನಿಂತರೋ ಆವಾಗಲೆಲ್ಲಾ ಅವರ ಹಾದಿಯಲ್ಲಿ ಅಡೆತಡೆಗಳನ್ನು ನಿರ್ಮಿಸಲಾಗಿದೆ. ಇದು ಕೇವಲ ಜನಸಾಮಾನ್ಯರು ಮಾಡಿದ್ದಲ್ಲ. ಉಲಮಾಗಳು ಮತ್ತು ಶೇಖ್‌ಗಳ ಒಂದು ದೊಡ್ಡ ಸಂಖ್ಯೆಯೇ ಈ ಕೆಲಸದಲ್ಲಿ ಭಾಗಿಯಾಗಿದೆ. ಅವರ ವಿರುದ್ಧ ಫಿತ್ನಾಗಳನ್ನು ನಡೆಸಲಾಗಿದೆ ಮತ್ತು ಅವರ ವಿರುದ್ಧ ಫತ್ವಾಗಳ ಮಳೆ ಸುರಿಸಲಾಗಿದೆ. ಸಮುದಾಯದ ಈ ದುರ್ವರ್ತನೆ ಮತ್ತು ಅದರ ಉಲಮಾಗಳ ಈ ಫಿತ್ನಾಗಳಿಂದ ಪ್ರಭಾವಿತವಾಗಿ ನಾವು ಸಮುದಾಯದ ಸುಧಾರಣೆಯ ಇಡೀ ಆಂದೋಲನವನ್ನೇ ಕೈಬಿಡಬೇಕೇನು? ಹೀಗೆ ಮಾಡುವುದು ಸರಿಯಾದೀತೇನು? ಅದು ಬಿಡಿ. ಹೀಗೆ ಆಲೋಚಿಸುವುದು ಕೂಡಾ ಎಷ್ಟರ ಮಟ್ಟಿಗೆ ಸರಿ? ಇದು ಸರಿಯಲ್ಲವೆಂದಾದರೆ, ಮತ್ತು ಖಂಡಿತವಾಗಿಯೂ ಅದು ಸರಿಯಲ್ಲ, ಇದೇ ರೀತಿಯ ತಪ್ಪುಗಳಿಗಾಗಿ ಮತ್ತು ದೌರ್ಬಲ್ಯಗಳಿಗಾಗಿ ಮುಸ್ಲಿಮೇತರರು ಮತ್ತು ನವಮುಸ್ಲಿಮರಿಂದ ಮುಖ ತಿರುಗಿಸಿಕೊಳ್ಳುವುದು ಸರಿಯಾಗುವುದು ಹೇಗೆ ತಾನೇ ಸಾಧ್ಯ?

## ಕಾರ್ಯವಿಧಾನ

ಮುಸ್ಲಿಮೇತರರಿಗೆ ಇಸ್ಲಾಮೀ ಆಂದೋಲನವನ್ನು ಪರಿಚಯಿಸಬೇಕಾದರೆ ಯಾವ ವಿಧಾನವನ್ನು ಅಳವಡಿಸಬೇಕು ಎಂಬ ಪ್ರಶ್ನೆ ಕೊನೆಯದಾಗಿ ನಮ್ಮ ಮುಂದೆ ಬರುತ್ತದೆ. ಹಿಂದಿನ ಪುಟಗಳಲ್ಲಿ ಈ ವಿಷಯ ಚದುರಿ ಚದುರಿ ಬಂದಿದ್ದರೂ ಸೌಲಭ್ಯಕ್ಕಾಗಿ ನಾನು

ಕೆಲ ವಿಚಾರಗಳನ್ನು ಸಂಕ್ಷಿಪ್ತವಾಗಿ ತಮ್ಮ ಮುಂದಿಡಲು ಪ್ರಯತ್ನಿಸುತ್ತೇನೆ.

## 1. ಹಕ್ಕುಗಳ ಪೂರ್ತೀಕರಣ

ಮುಸ್ಲಿಮೇತರರಿಗೆ ಇಸ್ಲಾಮಿನ ಸಂದೇಶವನ್ನು ನಾವು ತಲಪಿಸುತ್ತೇವೋ ಇಲ್ಲವೋ ಎಂಬುದು ಬೇರೆ ಮಾತು. ಅದಕ್ಕಿಂತಲೂ ಮುಖ್ಯವಾಗಿರುವ ಪ್ರಶ್ನೆಯೆಂದರೆ ನಾವು ಮನುಷ್ಯರು ಎಂಬ ನೆಲೆಯಲ್ಲಿ, ನೆರೆವಾಸಿಗಳೆಂಬ ನೆಲೆಯಲ್ಲಿ ಮುಸ್ಲಿಮೇತರರ ಮೇಲೆ ನಮಗಿರುವ ಹೊಣೆಗಾರಿಕೆಗಳನ್ನು ಈಡೇರಿಸುತ್ತೇವೋ ಇಲ್ಲವೋ ಎಂಬುದು. ನಾವು ಅದನ್ನು ಈಡೇರಿಸುತ್ತಿಲ್ಲ. ಹಿಂದೂಗಳು ಮತ್ತು ಮುಸ್ಲಿಮರ ನಡುವೆ ಒಂದು ದೊಡ್ಡ ಅಂತರ ನಿರ್ಮಾಣಗೊಳ್ಳಲು ನಾವು ಅವರಿಗೆ ಸಂಬಂಧಿಸಿದ ಹಕ್ಕುಗಳನ್ನು ಈಡೇರಿಸುವಲ್ಲಿ ಚ್ಯುತಿಮಾಡುತ್ತಿರುವುದೇ ಮುಖ್ಯ ಕಾರಣ. ಅವರ ಎಲ್ಲ ಅನ್ಯಾಯಗಳ ಹೊರತಾಗಿಯೂ ನಾವು ಅವರೊಂದಿಗೆ ನ್ಯಾಯದ ವರ್ತನೆ ತೋರಬೇಕಾಗಿತ್ತು. ಪವಿತ್ರ ಕುರ್‌ಆನ್ ನಮಗೆ ಈ ರೀತಿ ಮಾರ್ಗದರ್ಶನ ಮಾಡುತ್ತದೆ:

"ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆ ನಿಲ್ಲುವವರೂ ನ್ಯಾಯದ ಸಾಕ್ಷ್ಯ ವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ". (ಅಲ್ ಮಾಇದಃ)

ನ್ಯಾಯ ಮಾತ್ರವಲ್ಲ, ಅದಕ್ಕಿಂತಲೂ ಮುಂದುವರಿದು ಮುಸ್ಲಿಮೇತರರೊಂದಿಗೆ ಸದ್ವರ್ತನೆ ಮತ್ತು ಸನ್ನಡತೆಯ ಧೋರಣೆಯನ್ನು ಅನುಸರಿಸುವ ಮತ್ತು ಅವರ ಸುಖ ದುಃಖಗಳಲ್ಲಿ ಭಾಗಿಯಾಗುವ ಅಗತ್ಯವಿದೆ. ಕುರ್‌ಆನ್ ಹೀಗೆನ್ನುತ್ತದೆ-

"ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರಹಾಕಿರದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ."

ಇದು ಜಿಹಾದ್ ಮತ್ತು ಕಿತಾಲ್‌ನ ಕಾಲದಲ್ಲಿ ಪಾಲಿಸಬೇಕಾದ ಆಜ್ಞೆಯಾಗಿದೆ. ಸಂದೇಶ ಪ್ರಚಾರ ಕಾಲದಲ್ಲಿ ಅದನ್ನು ಅನುಸರಿಸುವುದು ಮತ್ತಷ್ಟು ಅಗತ್ಯವಾಗಿದೆ:

" ಒಳಿತು ಮತ್ತು ಕೆಡುಕುಗಳು ಸರಿಸಮಾನವಲ್ಲ. ನೀವು ಕೆಡುಕನ್ನು ಅತ್ಯುತ್ತಮ ಒಳಿತಿನ ಮೂಲಕ ದೂರೀಕರಿಸಿರಿ. ನಿಮ್ಮೊಂದಿಗೆ ಹಗೆತನ ಕಟ್ಟಿಕೊಂಡವನು ನಿಮ್ಮ ಆಪ್ತ ಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ". ಭಾರತದ ಅತಿದೊಡ್ಡ ಸಮಸ್ಯೆಯೆಂದರೆ ಇಲ್ಲಿನ ಎರಡು ಅತ್ಯಂತ ದೊಡ್ಡ ಸಮುದಾಯಗಳಾದ ಹಿಂದೂಗಳು ಮತ್ತು ಮುಸ್ಲಿಮರ ಮಧ್ಯೆ ತಪ್ಪುತಿಳುವಳಿಕೆ ಮತ್ತು ದ್ವೇಷದ ದೊಡ್ಡ ಕಂದರ ನಿರ್ಮಾಣವಾಗಿರುವುದು. ಈ ಪರಿಸ್ಥಿತಿ ಬದಲಾಗಬೇಕಾದುದು

ರಾಷ್ಟ್ರ, ಸಮುದಾಯ ಮತ್ತು ಧರ್ಮ ಎಲ್ಲದರ ಹಿತದೃಷ್ಟಿಯಿಂದಲೂ ಬಹಳ ಅವಶ್ಯಕವಾದುದು. ಇದರ ನಿವಾರಣೆ ಪುಸ್ತಕ, ಭಾಷಣ ಮತ್ತು ಮಾತುಕತೆಗಳ ಮೂಲಕವೂ ಆಗಬಹುದು. ಆದರೆ ಇದರ ನಿವಾರಣೆಯ ಅತ್ಯಂತ ವಾಸ್ತವಿಕ ಸ್ವರೂಪವೇನೆಂದರೆ ನಾವು ಕೇವಲ ಅಲ್ಲಾಹನ ಮೆಚ್ಚುಗೆಗಾಗಿ ಮತ್ತು ಪರಲೋಕದ ಮೋಕ್ಷವನ್ನು ಆಕಾಂಕ್ಷಿಸಿಕೊಂಡು ಮುಸ್ಲಿಮೇತರರಿಗೆ ಸಂಬಂಧಿಸಿದಂತೆ ನಮ್ಮ ಮೇಲಿರುವ ಕರ್ತವ್ಯಗಳನ್ನು ಈಡೇರಿಸುವ ಕಾರ್ಯದಲ್ಲಿ ಮಗ್ನರಾಗಬೇಕು. ನಾವು ಅವರ ಮಟ್ಟಿಗೆ ನ್ಯಾಯ, ಅನುಗ್ರಹ ಮತ್ತು ಸಚ್ಚಾರಿತ್ರ್ಯದ ಪ್ರತಿರೂಪಗಳಾಗಿ ಮಾರ್ಪಡಬೇಕು. ನಾವು ಅಮಿತವಾದ ಸೇವೆ ಮಾಡಬೇಕು. ಅವರು ಇಸ್ಲಾಮ್ ಮತ್ತು ಮುಸ್ಲಿಮರ ಹಿತಾಕಾಂಕ್ಷಿಗಳಾಗಬಹುದು ಅಥವಾ ಇಸ್ಲಾಮಿನ ಸಂದೇಶ ಸ್ವೀಕರಿಸಬಹುದೆಂಬ ಸಾವಿರದಲ್ಲೊಂದಂಶದಷ್ಟು ಆಶೆ ಇಲ್ಲದಿದ್ದರೂ ನಾವು ಈ ಕೆಲಸವನ್ನು ಮಾಡಬೇಕಾಗಿದೆ. ಸಾಮಾನ್ಯ ಪರಿಸ್ಥಿತಿಯಲ್ಲಿ ಇಂತಹ ಪ್ರಯತ್ನಗಳಿಂದಾಗಿ ಹೆಚ್ಚಿನವರ ಮನದಲ್ಲಿ ಇಸ್ಲಾಮ್, ಇಸ್ಲಾಮೀ ಆಂದೋಲನ ಮತ್ತು ಮುಸ್ಲಿಮ್ ಸಮುದಾಯದ ಬಗ್ಗೆ ಸದ್ಭಾವನೆ ಮೂಡುತ್ತದೆ ಮತ್ತು ಆ ಪೈಕಿ ಕೆಲ ಪುಣ್ಯಾತ್ಮರಿಗೆ ಸತ್ಯ ಸ್ವೀಕಾರದ ಭಾಗ್ಯವೂ ಲಭಿಸುತ್ತದೆ. ಸಚ್ಚಾರಿತ್ರ್ಯ ಮತ್ತು ಸನ್ನಡತೆಯ ಅಸ್ತ್ರ ಎಲ್ಲೂ ನಿಷ್ಪ್ರಯೋಜಕವಾಗುವುದಿಲ್ಲ.

## 2. ಸಹಕಾರ ಮತ್ತು ಸಹಭಾಗಿತ್ವ

ಯಾವ ಮುಸ್ಲಿಮೇತರ ಬಂಧುಗಳೊಂದಿಗೆ ನಮ್ಮ ಒಳ್ಳೆಯ ಸಂಬಂಧ ಸ್ಥಾಪನೆಯಾಗಿದೆಯೋ ಅವರಿಂದ ಮಾನವ ಸಮಾಜ ಸೇವೆ, ಸಮಾಜದ ಸುಧಾರಣೆ ಮತ್ತು ಒಳಿತು ಮತ್ತು ದೇವನಿಷ್ಠೆಯ ವಿಚಾರದಲ್ಲಿ ಸಂಪೂರ್ಣ ಸಹಕಾರ ಪಡೆಯುವ ಪ್ರಯತ್ನ ನಡೆಸಬೇಕಾಗಿದೆ. ಅದೇ ರೀತಿ ಪ್ರಸ್ತುತ ವಿಚಾರಗಳಲ್ಲಿ ಅವರಿಗೆ ಸಹಕಾರ ನೀಡಬೇಕು. ಕುರ್‌ಆನ್ ಹೀಗೆನ್ನುತ್ತದೆ-

"ಒಂದು ಕೂಟವು ಮಸ್ಜಿದುಲ್‌ಹರಾಮ್‌ನ ದಾರಿಯನ್ನು ನಿಮಗೆ ಮುಚ್ಚಿಬಿಟ್ಟುದರ ಬಗ್ಗೆ ನಿಮಗಿರುವ ಕೋಪವು ನಿಮ್ಮನ್ನು ಸಲ್ಲದ ಅತಿರೇಕವೆಸಗುವಷ್ಟು ರೇಗಿಸದಿರಲಿ. ಪುಣ್ಯ (ಬಿರ್ರ್) ಹಾಗೂ ದೇವಭಯದ ಕಾರ್ಯಗಳಲ್ಲಿ ಎಲ್ಲರ ಜತೆ ಸಹಕರಿಸಿರಿ ಮತ್ತು ಪಾಪ (ಇಸ್ಮ್) ಹಾಗೂ ಅತಿರೇಕದ ಕೆಲಸಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ."

(ಅಲ್ ಮಾಇದಃ 8)

'ಬಿರ್ರ್' ಎಂಬ ಪದ ಎಲ್ಲಾ ಒಳಿತುಗಳಿಗೂ ಬಳಕೆಯಾಗುತ್ತದಾದರೂ ಅದು ಮಾನವ ಹಕ್ಕುಗಳ ಪೂರ್ತೀಕರಣಕ್ಕೆ ವಿಶೇಷವಾಗಿ ಅನ್ವಯಹಿಸುತ್ತದೆ. ಅದೇ ರೀತಿ 'ಇಸ್ಮ್' ಎಂಬ ಪದವು ಮಾನವ ಹಕ್ಕುಗಳ ನಿರಾಕರಣೆಗೆ ಬಳಕೆಯಾಗುತ್ತದೆ. ಇದು ಕೂಡಾ ಜಿಹಾದ್ ಮತ್ತು ಕಿತಾಲ್‌ನ ಕಾಲದ ಸೂಕ್ತವಾಗಿದೆ. ಮುಸ್ಲಿಮರು ಕಾಬಾ ಸಂದರ್ಶಿಸುವುದನ್ನು ಕುರೈಶರು ತಡೆದಿದ್ದ ಕಾರಣದಿಂದ ಮುಸ್ಲಿಮರ ಭಾವನೆಗಳು ಉದ್ವಿಗ್ನಗೊಂಡಿದ್ದವು.

## 3. ಮನುಷ್ಯನನ್ನು ಅಭ್ಯಸಿಸುವುದು

ಸಂಬಂಧ ಸ್ಥಾಪನೆಯಾದ ನಂತರ ಇಸ್ಲಾಮೀ ಸಂದೇಶ ಮುಟ್ಟಿಸಲು ಆತುರ ಪಡಬೇಡಿರಿ. ಅವರೊಂದಿಗಿನ ಸಂಬಂಧವನ್ನು ಇನ್ನಷ್ಟು ಬಲಪಡಿಸಿ, ಮುಸ್ಲಿಮೇತರ ಸೋದರನಿಗೆ ಇನ್ನೂ ಹೆಚ್ಚಿನ ವಿಚಾರಗಳಲ್ಲಿ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಅವಕಾಶ ಕೊಟ್ಟು ಆತನ ಮನಸ್ಸು, ಭಾವನೆ, ಘುನೋಭಾವ ಮತ್ತು ಜೀವನವನ್ನು ಅರ್ಥೈಸಲು ಪ್ರಯತ್ನಿಸಬೇಕು. ಒಳ್ಳೆಯ ಸಂಪರ್ಕದ ನಂತರ ಎರಡನೆಯ ಅತ್ಯಂತ ಮಹತ್ವದ ಕೆಲಸ ಇದಾಗಿದೆ. ಮನಸ್ಸು ಮತ್ತು ವ್ಯಾವಹಾರಿಕ ಜೀವನವನ್ನು ತಿಳಿದು ಕೊಳ್ಳದೆ ನೀವು ನೀಡುವ ಸಂದೇಶ ವ್ಯರ್ಥವಾಗಬಹುದು. ಅಭಿಸಂಬೋಧಿತನು ಇಸ್ಲಾಮಿನಿಂದ ಇನ್ನೂ ದೂರ ಸಾಗುವ ಸಾಧ್ಯತೆಯನ್ನು ನಿರಾಕರಿಸಲಾಗದು.

## 4. ಸಂಭಾಷಣೆ

ಮನಸ್ಸನ್ನು ಸರಿಯಾಗಿ ಅರ್ಥ ಮಾಡಿಕೊಂಡ ಬಳಿಕ ಅದನ್ನು ಮುಂದಿಟ್ಟುಕೊಂಡು ಅಭಿಸಂಬೋಧಿತನ ಜತೆ ಮಾತನಾಡಿರಿ. ಮಾತುಕತೆ ಕೋಮಲವೂ ಪ್ರೀತಿಪೂರ್ಣವೂ ಹೃದಯ ಸ್ಪರ್ಶಿಯೂ ಯುಕ್ತಿಪೂರ್ಣವೂ ಆಗಿರಬೇಕು. ಎಲ್ಲವನ್ನೂ ಒಂದೇ ಉಸಿರಿನಲ್ಲಿ ಒಪ್ಪಿಸಲು ಪ್ರಯತ್ನಿಸದಿರಿ. ಇಸ್ಲಾಮಿನ ವಿಶ್ವಾಸ ಮತ್ತು ಮೂಲಭೂತ ಬೋಧನೆಗಳನ್ನು ಒಂದೊಂದಾಗಿ ಮನವರಿಕೆ ಮಾಡಿಸಿರಿ. ಮಾತು ಸ್ಪಷ್ಟವೂ ಯುಕ್ತಿಪೂರ್ಣವೂ ಆಗಿರಬೇಕು. ಹಿತಾಕಾಂಕ್ಷೆಯಿಂದ ತುಂಬಿರಬೇಕು. ವಿರೋಧಿ ವಿಚಾರಧಾರೆಗಳನ್ನು ಹಿತಾಕಾಂಕ್ಷೆ ಮತ್ತು ಯುಕ್ತಿಯಿಂದಲ್ಲದೆ ಟೀಕಿಸದಿರಿ. ಚರ್ಚೆ ಮತ್ತು ತಕರಾರಿನಿಂದ ದೂರವಿರಲು ಗರಿಷ್ಠ ಪ್ರಯತ್ನಿಸಿರಿ. ಬುದ್ಧಿಯನ್ನು ಬುದ್ಧಿಯಿಂದ ಎದುರಿಸದಿರಿ. ಹೃದಯದ ಮೂಲಕ ಹೃದಯಕ್ಕೆ ಕರೆ ಕೊಡಿರಿ.

## 5. ಪುಸ್ತಕಗಳ ಅಧ್ಯಯನ

ಅಭಿಸಂಬೋಧಿತನು ನಿಮ್ಮಿಂದ ಪುಸ್ತಕಗಳನ್ನು ಕೇಳಿದರೆ ಆರಂಭದಲ್ಲಿ ಸಂಕ್ಷಿಪ್ತ ಮತ್ತು ಸಣ್ಣ ಹೊತ್ತಗೆಗಳನ್ನು ನೀಡಿರಿ. ಅನಂತರ ಮಾತುಕತೆಗಳ ವೇಳೆ ಅವರು ಪುಸ್ತಕಗಳನ್ನು ಎಷ್ಟರ ಮಟ್ಟಿಗೆ ಅರ್ಥ ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿಯಲು ಜಾಣ್ಮೆಯಿಂದ ಪ್ರಯತ್ನಿಸಿರಿ. ನಿರ್ಮಾಣ ಮತ್ತು ಸಂಹಾರ, ಶಾಂತಿಯ ಮಾರ್ಗ ಮತ್ತು ಇಸ್ಲಾಮ್ ಧರ್ಮ ಎಂಬ ಕೃತಿಗಳನ್ನು ಆರಂಭದಲ್ಲಿ ಅಧ್ಯಯನಕ್ಕೆ ನೀಡುವುದು ಹೆಚ್ಚು ಉಪಯುಕ್ತವಾಗಬಹುದು. ಸೀರತ್‌ಗೆ (ಪ್ರವಾದಿ ಚರಿತ್ರೆ) ಸಂಬಂಧಿಸಿದ ಸೂಕ್ತ ಪುಸ್ತಕಗಳನ್ನು ನೀಡುವುದು ಬಹಳ ಪರಿಣಾಮಕಾರಿಯಾಗಬಹುದು. ಕೆಲವು ಪುಸ್ತಕಗಳ ಅಧ್ಯಯನದ ನಂತರ ಪವಿತ್ರಕುರ್‌ಆನ್‌ನ ಅನುವಾದವನ್ನು ನೀಡಿರಿ.

❋